ಕರ್ನಾಟಕ ಸರ್ಕಾರ

ಸಾರ್ವಜನಿಕ ಶಿಕ್ಷಣ ಇಲಾಖೆ

# ಕರ್ನಾಟಕ ಸಂಗೀತ

ಪ್ರಾಥಮಿಕ ಹಂತ (ಜೂನಿಯರ್ ಗ್ರೇಡ್)




ಪಠ್ಯಪುಸ್ತಕ ನಿರ್ದೇಶನಾಲಯ

ನಂ.4, 100ಅಡಿ ವರ್ತುಲರಸ್ತೆ, ಬನಶಂಕರಿ 3ನೇಹಂತ,
ಹೊಸಕೆರೆಹಳ್ಳಿ, ಬೆಂಗಳೂರು - 560 085

ಕರ್ನಾಟಕ  ಸರ್ಕಾರ

ಸಾರ್ವಜನಿಕ ಶಿಕ್ಷಣ ಇಲಾಖೆ

# ಕರ್ನಾಟಕ ಸಂಗೀತ

## ಪ್ರಾಥಮಿಕ ಹಂತ

(ಪರಿಷ್ಕೃತ ಪಠ್ಯ ವಸ್ತುವಿಗನುಗುಣವಾಗಿ)



ಬೆಂಗಳೂರು
2005

| | | |
|---|---|---|
| 1. ಶೀರ್ಷಿಕೆ | – | **ಕರ್ನಾಟಕ ಸಂಗೀತ**<br>**ಪ್ರಾಥಮಿಕ ಹಂತ (ಪರಿಷ್ಕೃತ)** |
| 2. ಪ್ರಕಟಣೆ ಹಕ್ಕುಗಳು<br>(1) ವಿಶೇಷ ಸಂಗೀತ, ನೃತ್ಯ, ತಾಳವಾದ್ಯ ವಿಷಯಗಳಿಗೆ ಸಂಬಂಧಿಸಿದಂತೆ ಪಠ್ಯಪುಸ್ತಕ ನಿರ್ದೇಶನಾಲಯ ಹೊರತಂದಿರುವ ಎಲ್ಲಾ ಹಂತದ ಪಠ್ಯ ಪುಸ್ತಕಗಳು ಮತ್ತು ನಾಟಕ ಡಿಪ್ಲೊಮೊ ಪಠ್ಯ ಪುಸ್ತಕಗಳ ಹಕ್ಕನ್ನು ನಿರ್ದೇಶನಾಲಯ ಕಾಯ್ದಿರಿಸಿದೆ.<br>(2) ಈ ಪಠ್ಯ ಪುಸ್ತಕಗಳ ಭಾಷಾಂತರ, ಮರುಮುದ್ರಣ ಈ ಪುಸ್ತಕಗಳಲ್ಲಿ ಬಳಕೆಯಾಗಿರುವ ರೇಖಾಚಿತ್ರಗಳು, ಛಾಯಾಚಿತ್ರಗಳನ್ನು ಬೇರೆ ಸಂದರ್ಭದಲ್ಲಿ, ಬೇರೆ ಪುಸ್ತಕಗಳಲ್ಲಿ ಬಳಕೆಮಾಡುವಂತಿಲ್ಲ.<br>(3) ನಿರ್ದೇಶನಾಲಯದ ಅನುಮತಿ ಇಲ್ಲದೆ ಈ ಪುಸ್ತಕಗಳಿಗೆ ಸಂಬಂಧಿಸಿದಂತೆ ಗೈಡ್ ಅಥವಾ ಮತ್ತಾವುದೇ ರೀತಿಯಲ್ಲಿ ವಿಷಯವನ್ನು ಬಳಕೆಮಾಡಬಾರದು.<br>(4) ಇಂತಹ ಕಾರ್ಯಮಾಡಿದವರ ವಿರುದ್ಧ ಪಠ್ಯಪುಸ್ತಕ ನಿರ್ದೇಶನಾಲಯ ತೀವ್ರವಾದ ಕಾನೂನು ಕ್ರಮವನ್ನು ಕೈಗೊಳ್ಳುತ್ತದೆ ಎಂದು ಈ ಮೂಲಕ ತಿಳಿಸಲಾಗಿದೆ. | – | ನಿರ್ದೇಶಕರು, ಪಠ್ಯಪುಸ್ತಕ ನಿರ್ದೇಶನಾಲಯ<br>ನಂ.4, 100 ಅಡಿ ವರ್ತುಲ ರಸ್ತೆ,<br>ಬನಶಂಕರಿ ಮೂರನೇ ಹಂತ, ಹೊಸಕೆರೆಹಳ್ಳಿ,<br>ಬೆಂಗಳೂರು - 560 085. |
| 3. ಮುದ್ರಣ | – | 1997, 2000, 2004, 2005 |
| 4. ಮುದ್ರಿತ ಪ್ರತಿಗಳ ಸಂಖ್ಯೆ | – | 15000 |
| 5. ಮುದ್ರಣ ಕಾಗದದ ಬಳಕೆ | – | 80 ಜಿ.ಎಸ್.ಎಂ. ಮ್ಯಾಪ್ ಲಿಥೋ |
| 6. ಪುಸ್ತಕದ ಬೆಲೆ | – | Rs 4 5 = - |
| 7. ಡಿ.ಟಿ.ಪಿ. | – | ಶ್ರೀ ಬಾಲಾಜಿ ಲೇಸರ್ ಗ್ರಾಫಿಕ್ಸ್<br>ಬಸವೇಶ್ವರನಗರ, ಬೆಂಗಳೂರು-560079. |
| 8. ಮುದ್ರಕರು | – | ಶ್ರೀ ಬಾಲಾಜಿ ಟ್ರೇಡರ್ಸ್<br>ನಾಗರಬಾವಿ, ಬೆಂಗಳೂರು. |

# ಮುನ್ನುಡಿ

ಸಂಗೀತ, ನೃತ್ಯ, ಕಲೆಗಳು ರಾಷ್ಟ್ರೀಯ ಭಾವೈಕ್ಯತೆಗೆ, ಸಾಮಾಜಿಕ ಹಾಗೂ ಧಾರ್ಮಿಕ ಐಕ್ಯತೆಗಳನ್ನು ತರುವ ಸಾಧನಗಳು. ಅಮೂಲ್ಯವಾದ ಜೀವನ ಮೌಲ್ಯಗಳನ್ನು ರಸ, ಭಾವಗಳ ಮೂಲಕ ಸಾರುವುದಲ್ಲದೆ ಮಾನವನ ಜೀವನದಲ್ಲಿ ಪರಿಣಾಮಕಾರಿಯಾಗಿರುವುದೇ ಸಂಗೀತ. ''**ಸಂಗೀತ ಜ್ಞಾನವಿಲ್ಲದ ಜೀವನ ಬರಡು**'' ಎಂಬುದು ಗುರುಹಿರಿಯರ ಅನುಭವದ ಮಾತಾಗಿದೆ. ಮಾನವನಲ್ಲಿನ ಸಹಜವಾದ, ಸುಮಧುರವಾದ ಭಾವನೆಗಳ ಬೆಳವಣಿಗೆಗಾಗಿ ಅವನು ಕಲಾವಿದನೋ, ಕಲಾರಾಧಕನೋ, ರಸಿಕನೋ ಆಗಲೇಬೇಕು. ಆದ್ದರಿಂದ ಎಳೆಯ ವಯಸ್ಸಿನಿಂದಲೇ ಮಕ್ಕಳಿಗೆ ಕಲೆಗಳಲ್ಲಿ ಆಸಕ್ತಿ ಮೂಡಿಸುವುದು, ತೊಡಗಿಸುವುದು, ಕಲಾಭಿಮಾನಿಗಳಾಗಲು ಉತ್ತೇಜಿಸುವುದು ಪೋಷಕರ ಹಾಗೂ ಬೋಧಕರ ಕರ್ತವ್ಯವಾಗಿದೆ.

ಕರ್ನಾಟಕ ಘನಸರ್ಕಾರ ರಾಜ್ಯದ ಮಕ್ಕಳ ಕಲಾಸಕ್ತಿಯನ್ನು ಸಾರ್ಥಕಗೊಳಿಸಲೆಂದು ಸಂಬಂಧಪಟ್ಟ ಪ್ರದರ್ಶನ ಕಲೆಯ ವಿಷಯಗಳಲ್ಲಿ ಪಠ್ಯಪುಸ್ತಕಗಳನ್ನು ಹೊರತರಲು ಅವಕಾಶ ನೀಡಿರುವುದು ಜನೋಪಕಾರಿಯಾಗಿದೆ.

1. ಕರ್ನಾಟಕ ಸಂಗೀತ
2. ಕರ್ನಾಟಕ ತಾಳವಾದ್ಯ
3. ಹಿಂದೂಸ್ಥಾನಿ ಸಂಗೀತ
4. ಭರತನಾಟ್ಯ
5. ಕಥಕ್ ನೃತ್ಯ
6. ಕೂಚಿಪೂಡಿ ನೃತ್ಯ
7. ಕಥಕಳಿ ನೃತ್ಯ

ಈಗಾಗಲೇ ಪ್ರಚಲಿತವಿರುವ ಪ್ರಾಥಮಿಕ ಹಂತದ ಕರ್ನಾಟಕಸಂಗೀತ ಪಠ್ಯಪುಸ್ತಕದ ಬಗ್ಗೆ ಬೋಧಕರು ಮತ್ತು ಕೆಲವರು ವಿದ್ವಾಂಸರುಗಳಿಂದ ಬಂದಿರುವ ಸಲಹೆಮೇರೆಗೆ ಪಠ್ಯಸಾಮಗ್ರಿಯ ಪರಿಷ್ಕರಣೆಯನ್ನು ತೆಗೆದುಕೊಂಡು ಈ ಪರಿಷ್ಕೃತ ಪಠ್ಯಪುಸ್ತಕವನ್ನು ಇಲಾಖೆ ಹೊರತಂದಿದೆ. ಸಾರ್ವಜನಿಕರ ಬೇಡಿಕೆಗೆ ಮನ್ನಣೆ ಕೊಡುವುದು ಇಲಾಖೆಯ ಕರ್ತವ್ಯವೆಂದು ಭಾವಿಸಿ, ಈ ಕಾರ್ಯವನ್ನು ಕೈಗೊಳ್ಳಲಾಗಿದೆ.

ಕರ್ನಾಟಕದಲ್ಲಿನ ವಿದ್ಯಾರ್ಥಿಗಳು ಮೇಲೆ ಹೇಳಿರುವ ವಿಷಯಗಳಲ್ಲಿ ಆಸಕ್ತಿತೋರಿಸಿ ತರಬೇತಿ ಪಡೆಯುತ್ತಿರುವುದರಿಂದ ಅವರ ಅಗತ್ಯಕ್ಕನುಗುಣವಾಗಿ ಈ ವಿಷಯಗಳ ಪಠ್ಯಪುಸ್ತಕಗಳ ರಚನೆಯನ್ನು ಕೈಗೊಳ್ಳಲಾಗಿದೆ. ಈ ಪಠ್ಯಪುಸ್ತಕದ ರಚನೆಯಲ್ಲಿ ಕರ್ನಾಟಕ ರಾಜ್ಯದ ಪರಿಣತರ ಸೇವೆಯನ್ನು ಪಡೆದುಕೊಳ್ಳಲಾಗಿದೆ. ಪಠ್ಯಪುಸ್ತಕ ನಿರ್ದೇಶನಾಲಯವು ಇವರೆಲ್ಲರ ಸೇವೆಯನ್ನು ಸ್ಮರಿಸಿ ಕೃತಜ್ಞತೆಯನ್ನು ಅರ್ಪಿಸುತ್ತದೆ.

ಇಲಾಖೆ ಹೊರತಂದಿರುವ ವಿಶೇಷ ಸಂಗೀತ, ತಾಳವಾದ್ಯ, ನೃತ್ಯ ವಿಷಯಗಳ ಪರೀಕ್ಷೆಗಳನ್ನು ನಡೆಸಿ ಸಹಕರಿಸುತ್ತಿರುವ ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿಯ ನಿರ್ದೇಶಕರ ಸಹಕಾರ ಪ್ರಶಂಸನೀಯ.

ಸರ್ಕಾರಿ ಕೇಂದ್ರ ಮುದ್ರಣಾಲಯದ ನಿರ್ದೇಶಕರು, ಉತ್ತಮ ರೀತಿಯಲ್ಲಿ ಮುದ್ರಣಕಾರ್ಯ ಹಾಗೂ ರಾಜ್ಯದ ಎಲ್ಲೆಡೆಯಲ್ಲೂ ಸಂಗೀತ ಇತ್ಯಾದಿ ಪಠ್ಯಪುಸ್ತಕಗಳ ಸರಬರಾಜಿಗಾಗಿ ಏರ್ಪಾಡು ಮಾಡಿರುವುದಕ್ಕೆ ನಮ್ಮ ನಿರ್ದೇಶನಾಲಯ ಆಭಾರಿಯಾಗಿದೆ.

ಒಟ್ಟಿನಲ್ಲಿ ಪ್ರತ್ಯಕ್ಷ, ಪರೋಕ್ಷವಾಗಿ ನಮ್ಮ ಈ ಕಾರ್ಯದಲ್ಲಿ ಸಹಕಾರ ನೀಡಿರುವ ಸರ್ವರನ್ನೂ ಪಠ್ಯಪುಸ್ತಕ ನಿರ್ದೇಶನಾಲಯ ಅಭಿನಂದಿಸುತ್ತದೆ.

ನಿರ್ದೇಶಕರು

ಪಠ್ಯಪುಸ್ತಕ ನಿರ್ದೇಶನಾಲಯ

ಬೆಂಗಳೂರು.

# ಪಠ್ಯಪುಸ್ತಕ ರಚನಾ ಸಮಿತಿ

1. ಡಾ. ಶ್ರೀಮತಿ ಟಿ. ಶಚೀದೇವಿ.ಎಂ. ಮ್ಯೂಸಿಕ್ ಪಿಹೆಚ್‌ಡಿ. — ಅಧ್ಯಕ್ಷರು
(ತಿರುಮಲೈ ಸೋದರಿಯರು)
ಸಂಗೀತ ಪ್ರಾಧ್ಯಾಪಕರು,
ಮಹಾರಾಣಿ ಕಲಾ ಕಾಲೇಜು ಬೆಂಗಳೂರು.

2. ವಿ || ಇ.ಪಿ. ಅಲಮೇಲು, — ಸದಸ್ಯರು
ಶ್ರೀನಿವಾಸ್ ನಂ. 11, 8ನೇ ಅಡ್ಡರಸ್ತೆ
ಹನುಮಂತನಗರ ಬೆಂಗಳೂರು 560018

3. ವಿ|| ಪದ್ಮಾಗುರುದತ್ ಎಂ.ಎ. — ಸದಸ್ಯರು
ನಂ, 136, 4ನೇ ವಿಭಾಗ(ಪೂರ್ವ)
16ನೇ ಮುಖ್ಯ ರಸ್ತೆ 33ನೇ ಅಡ್ಡರಸ್ತೆ,
ಜಯನಗರ, ಬೆಂಗಳೂರು. 560011

4. ಸಂಗೀತ ಕಲಾರತ್ನ ಆರ್.ಕೆ. ಶ್ರೀಕಂಠನ್ — ಪರಿಶೀಲಕರು
ನಿವೃತ್ತ ಸಂಗೀತ ನಿರ್ಮಾಪಕರು, ಆಕಾಶವಾಣಿ,
ಬೆಂಗಳೂರು, ಖ್ಯಾತ ವಿದ್ವಾಂಸರು,
ನಂ.4 ಪುಟ್ಟರಂಗಣ್ಣ ಲೇಔಟ್ ಶೇಷಾದ್ರಿಪುರ.
ಬೆಂಗಳೂರು 560020.

5. ಗಾನಕಲಾಭೂಷಣ ಪ್ರೊ. ಆನೂರು ರಾಮಕೃಷ್ಣ — ವಿಶೇಷ ಆಹ್ವಾನಿತರು
ನಿವೃತ್ತ ಉಪನ್ಯಾಸಕರು ನೃತ್ಯ, ನಾಟಕ ಸಂಗೀತ
ವಿಭಾಗ (ಪ್ರಯೋಗಿಕ ಕಲಾವಿಭಾಗ) ಬೆಂಗಳೂರು
ವಿಶ್ವವಿದ್ಯಾನಿಲಯ, ಬೆಂಗಳೂರು.
17, 11ನೇ ಮುಖ್ಯರಸ್ತೆ 4ನೇ ಬಡಾವಣೆ (ಪೂರ್ವ)
ಜಯನಗರ, ಬೆಂಗಳೂರು 560011

6. ಶ್ರೀಮತಿ ಎಂ. ರುಕ್ಮಿಣಿಯಮ್ಮ — ಸಮನ್ವಯಾಧಿಕಾರಿ
ನಿವೃತ್ತ ಸಹಾಯಕ ನಿರ್ದೇಶಕಿ
ಪಠ್ಯಪುಸ್ತಕ ನಿರ್ದೇಶನಾಲಯ,
ಬೆಂಗಳೂರು- 560085.

7. ಶ್ರೀಮತಿ ಬಿ. ಆರ್. ಸುಶೀಲಮ್ಮ — ಸಂಚಾಲಕರು
ಸಹಾಯಕ ನಿರ್ದೇಶಕಿ ಪಠ್ಯಪುಸ್ತಕ ನಿರ್ದೇಶನಾಲಯ,

8. ಶ್ರೀ ಬಾಗೂರು ಮಾರ್ಕಾಂಡೇಯ — ಕಲಾಕಾರರು

9.. ಶ್ರೀ ಬಿ.ಸಿ. ಚಂದ್ರಪ್ರಕಾಶ್ — ಛಾಯಾ ಚಿತ್ರಕಾರರು

## ಪಠ್ಯಪುಸ್ತಕ ಪರಿಷ್ಕರಣಾ ಸಮಿತಿ

1. **ವಿದುಷಿ ವಸಂತಮಾಧವಿ** — ಸದಸ್ಯರು
   75, 'ಪಲ್ಲವಿ'
   7ನೇ ಅಡ್ಡರಸ್ತೆ, ಐ.ಟಿ.ಐ.ಲೇಔಟ್
   ಜೆ.ಪಿ ನಗರ 1ನೇಹಂತ, ಬೆಂಗಳೂರು - 560078
   ದೂರವಾಣಿ ಸಂ. 26646089

2. **ವಿದುಷಿ ಪದ್ಮಾಗುರುದತ್** — ಸದಸ್ಯರು
   ನಂ, 136, 4ನೇ ವಿಭಾಗ(ಪೂರ್ವ)
   16ನೇ ಮುಖ್ಯ ರಸ್ತೆ 33ನೇ ಅಡ್ಡರಸ್ತೆ,
   ಜಯನಗರ, ಬೆಂಗಳೂರು. 560011

3. **ವಿದ್ವಾನ್ ಶ್ರೀಕಾಂತಂ ನಾಗೇಂದ್ರಶಾಸ್ತ್ರಿ** — ಸದಸ್ಯರು
   ಉಪನ್ಯಾಸಕರು
   ಮಹಾರಾಣಿ ಕಲಾ ಕಾಲೇಜು,
   ಬೆಂಗಳೂರು

4. **ವಿದ್ವಾನ್ ಶೃಂಗೇರಿ ಎಚ್.ಎಸ್.ನಾಗರಾಜ್** — ಸದಸ್ಯರು
   53, ಶ್ರೀಸಾಯಿಮಂದಿರದ ಎದುರು
   3ನೇ ಅಡ್ಡರಸ್ತೆ, ಬಸವನಗುಡಿ, ಶಿವಮೊಗ್ಗ, 577201

5. **ಶ್ರೀಮತಿ ಎಂ. ರುಕ್ಮಿಣಿಯಮ್ಮ** — ಸದಸ್ಯರು
   ನಿವೃತ್ತ ಸಹಾಯಕ ನಿರ್ದೇಶಕಿ
   ಪಠ್ಯಪುಸ್ತಕ ನಿರ್ದೇಶನಾಲಯ,
   ಬೆಂಗಳೂರು- 560085.

6. **ವಿದ್ವಾನ್ ಎಂ.ಎನ್. ಪ್ರಶಾಂತ್** — ಸಂಚಾಲಕರು
   ಸಹಾಯಕ ನಿರ್ದೇಶಕರು (ಪ್ರಭಾರ)
   ಪಠ್ಯಪುಸ್ತಕ ನಿರ್ದೇಶನಾಲಯ,

# ಪೀಠಿಕೆ

ಕರ್ನಾಟಕ ರಾಜ್ಯ ಪ್ರೌಢಶಿಕ್ಷಣ ಪರೀಕ್ಷಾ ಮಂಡಲಿಯು ಸುಮಾರು ಐವತ್ತಕ್ಕೂ ಹೆಚ್ಚು ವರ್ಷಗಳಿಂದ ಸಂಗೀತ- ನೃತ್ಯ - ತಾಳವಾದ್ಯ ಪರೀಕ್ಷೆಗಳನ್ನು ನಡೆಸುತ್ತ ಬಂದಿರುವುದು ಸರ್ವವೇದ್ಯ. ಆದರೆ ಪಠ್ಯಪುಸ್ತಕಗಳು ಲಭ್ಯವಾಗುವಂತಹ ನಿಟ್ಟಿನಲ್ಲಿ ಕೆಲಸವು ನಡೆದಿರಲಿಲ್ಲ. 1993ರಲ್ಲಿ ಪರಿಷ್ಕೃತ ಪಠ್ಯವಸ್ತುವನ್ನು ನಿಗದಿಪಡಿಸಿ ಲಕ್ಷಣ - ಲಕ್ಷ್ಯಗಳೆರಡರಲ್ಲೂ ಸಾಧ್ಯವಾದಷ್ಟು ಪೂರ್ಣವಾಗಿ ಮಾಹಿತಿ - ಮಾರ್ಗದರ್ಶನ ನೀಡುವಂತಹ ಪಠ್ಯಪುಸ್ತಕಗಳನ್ನು ಒದಗಿಸಿ ಕರ್ನಾಟಕ ಘನಸರ್ಕಾರವು ಅತಿ ಸ್ತುತ್ಯವಾದ ಕೆಲಸವನ್ನು ಮಾಡಿದೆ. ಸಂಗೀತ ನೃತ್ಯಾದಿ ಕಲಾಪ್ರಕಾರಗಳ ಎಲ್ಲ ಶಿಕ್ಷಕರೂ ವಿದ್ಯಾರ್ಥಿಗಳೂ ಸರ್ಕಾರದ ಈ ಕೊಡುಗೆಗೆ ಋಣಿಯಾಗಿರುತ್ತಾರೆ.

ಆಯಾ ಮಟ್ಟದ ವಿದ್ಯಾರ್ಥಿಗಳ ಅಗತ್ಯವನ್ನು ಪೂರೈಸುವುದೇ ಈ ಎಲ್ಲಾ ಪುಸ್ತಕಗಳ ಮುಖ್ಯ ಉದ್ದೇಶ. ಪ್ರಾಥಮಿಕ ಹಂತದ ಈ ಪುಸ್ತಕದಲ್ಲಿ ಅಭ್ಯಾಸಗಾನದ ಸ್ವರಾವಳಿಗಳು ಗೀತೆ ಜತಿಸ್ವರಗಳೂ ವೇದಿಕೆಗೆ ಮುಂದೆ ಬೇಕಾಗುವಂತಹ ವರ್ಣಗಳು. ಮಧ್ಯಮಕಾಲ ಹಾಗೂ ವಿಳಂಬಕಾಲದ ಕೃತಿಗಳು ಕೀರ್ತನೆಗಳೂ ವರ್ಣಮಟ್ಟಿನೊಡನೆ ಶಿಕ್ಷಕರನ್ನೂ ವಿದ್ಯಾರ್ಥಿಗಳನ್ನೂ ತಲುಪುತ್ತಿವೆ. ಹಾಗೆಯೇ ಅಗತ್ಯವಾದ ಶಾಸ್ತ್ರಭಾಗವೂ ವಾಗ್ಗೇಯಕಾರರ ಸಂಕ್ಷಿಪ್ತ ಜೀವನ-ಕೊಡುಗೆಗಳೂ ಇಲ್ಲಿ ದೊರಕುತ್ತವೆ. ಬೋಧಕರು ಈ ಪಠ್ಯಪುಸ್ತಕದಲ್ಲಿ ಕೊಟ್ಟಿರುವ ರಚನೆಗಳನ್ನೇ ಪಾಠ ಮಾಡಬೇಕೆಂಬ ನಿಯಮವಿಲ್ಲ. ಇಲ್ಲಿನ ರಚನೆಗಳ ಗುಣಮಟ್ಟವನ್ನು ಗಮನಿಸಿಕೊಂಡು ಬೇರೆ ಯಾವುದೇ ರಚನೆಗಳನ್ನಾದರೂ ರಾಗಲಕ್ಷಣಕ್ಕಾಗಿ ಕೊಟ್ಟಿರುವ ರಾಗಗಳಲ್ಲಿ ಕಲಿಸಬಹುದು.

ಈಗಾಗಲೇ ಬಿಡುಗಡೆಯಾದ ಪುಸ್ತಕದಲ್ಲಿದ್ದ ಅಲ್ಪ ಸ್ವಲ್ಪ ಲೋಪದೋಷಗಳನ್ನು ಹಲವಾರು ವಿದ್ಯಾರ್ಥಿಗಳೂ ಶಿಕ್ಷಕರೂ ಪಠ್ಯಪುಸ್ತಕ ನಿರ್ದೇಶನಾಲಯದ ಗಮನಕ್ಕೆ ತಂದ ಕಾರಣ ಪರಿಷ್ಕರಣಗೊಂಡು ರೂಪತಾಳಿರುವ ಪುಸ್ತಕ ಈಗ ನಿಮ್ಮ ಕೈ ಸೇರಿದೆ.

ಇಂತಹ ಜವಾಬ್ದಾರಿಯನ್ನು ಹೊತ್ತು ಅವಿರತವಾಗಿ ದುಡಿಯುತ್ತಿರುವ ಸಮನ್ವಯಾಧಿಕಾರಿಣಿ ನಿವೃತ್ತ ಸಹಾಯಕ ನಿರ್ದೇಶಕಿ **ಶ್ರೀಮತಿ ರುಕ್ಮಿಣಿಯಮ್ಮ**ನವರಿಗೆ ನಮ್ಮೆಲ್ಲರ ಕೃತಜ್ಞತಾಪೂರ್ವಕ ನಮನಗಳು ಸಲ್ಲುತ್ತವೆ. ದಾವಣಗೆರೆ ಅಕ್ಷಯ ಆಗ್ರೋಸೇಲ್ಸ್ ಪ್ರೈವೇಟ್ ಲಿಮಿಟೆಡ್‌ನ ನಿರ್ವಾಹಕ ನಿರ್ದೇಶಕರಾದ ಶ್ರೀ ಜಿ.ಎಸ್. ಪ್ರಕಾಶ್ ಅವರು ಈ ಪುಸ್ತಕದಲ್ಲಿರುವ ಛಾಯಾಚಿತ್ರಗಳ ಪ್ರಾಯೋಜಕರಾಗಿ ನೆರವಿತ್ತಿದ್ದಾರೆ. ಅವರು ಅತ್ಯವಶ್ಯಕವಾದ ಕೆಲಸವನ್ನು ಸಂಗೀತ - ನೃತ್ಯಾದಿ ಲಲಿತಕಲೆಗಳ ಪೋಷಣಾರ್ಥವಾಗಿ ನಿರ್ವಹಿಸುತ್ತಿರುವುದಕ್ಕಾಗಿ ಎಲ್ಲರ ಹೃತ್ಪೂರ್ವಕ ವಂದನೆಗಳಿಗೆ ಪಾತ್ರರಾಗಿದ್ದಾರೆ.

ಎಲ್ಲಾ ಕಾಲಕ್ಕೂ ತಮ್ಮ ಸಹಕಾರ ನೀಡಿ ಕಲಾಪೋಷಣೆಗೆ ಒತ್ತಾಸೆ ನೀಡುತ್ತಿರುವ ಪಠ್ಯಪುಸ್ತಕ ನಿರ್ದೇಶನಾಲಯದ ಅಧಿಕಾರ ವರ್ಗದವರಿಗೂ ಸಿಬ್ಬಂದಿವರ್ಗದವರಿಗೂ ನಮ್ಮ ಕೃತಜ್ಞತಾಪೂರ್ವಕವಾದ ವಂದನೆಗಳು.

ಈ ಪಠ್ಯಪುಸ್ತಕದ ಮುದ್ರಣ ಹಾಗೂ ರಾಜ್ಯಾದ್ಯಂತ ಸರಬರಾಜಿಗೆ ಏರ್ಪಾಡು ಮಾಡಿರುವ ಸರ್ಕಾರಿ ಕೇಂದ್ರ ಮುದ್ರಣಾಲಯದ ನಿರ್ದೇಶಕರಿಗೆ ನಮ್ಮ ಸಮಿತಿ ಆಭಾರಿಯಾಗಿದೆ.

ಕಾರ್ಯ - ಕಾರಣ ನಿಮಿತ್ತ ಈ ಮಹತ್ಕಾರ್ಯದಲ್ಲಿ ನೆರವಾಗಿರುವ ಎಲ್ಲಾ ಕಲಾವಿದರಿಗೂ ಕಲಾ ಪೋಷಕರಿಗೂ ರಸಿಕರಿಗೂ ನಮ್ಮ ಸಮಿತಿಯವರ ಅಭಿನಂದನೆಗಳು.

ಬೆಂಗಳೂರು

**ವಿದುಷಿ ವಸಂತ ಮಾಧವಿ**

ಪಠ್ಯಪುಸ್ತಕ ರಚನಾ ಸಮಿತಿ, ಸದಸ್ಯರು

# ಬೋಧಕರಿಗೆ ಸೂಚನೆ

1. ಶುದ್ಧವಾದ ಪಾಠಾಂತರಕ್ಕೆ ಪ್ರಾಮುಖ್ಯತೆ ಕೊಡುವುದು.
2. ವಿದ್ಯಾರ್ಥಿಗಳಲ್ಲಿ ಸಂಗೀತ ಕಲಿಕೆಗಾಗಿ ಕುತೂಹಲವನ್ನು ಕೆರಳಿಸುವುದು.
3. ವಿದ್ಯಾರ್ಥಿಗಳ ಬುದ್ಧಿ ಸಾಮರ್ಥ್ಯವನ್ನು ಅನುಸರಿಸಿ ಸಂಗೀತ ಪಾಠಗಳನ್ನು ಹೇಳಿಕೊಡುವುದು.
4. ಸಂಗೀತವನ್ನು ಕಲಿಸುವಾಗ ಸೃಜನಶೀಲತೆಯನ್ನು ಬೆಳೆಸುವುದು.
5. ಶ್ರುತಿ ಮತ್ತು ಲಯ ಜ್ಞಾನದ ಕಡೆಗೆ ಗಮನಸೆಳೆಯುವುದು.
6. ಸಂಗೀತ ರಚನೆಗಳನ್ನು ಅಭ್ಯಾಸ ಮಾಡುವಾಗ ಶುದ್ಧ ಪಾಠಾಂತರಕ್ಕೆ ಗಮನವಿತ್ತು, ಸಾಹಿತ್ಯವನ್ನು ಬಾಯಿಪಾಠ ಮಾಡಿಸಿ, ಆ ರಚನೆಯ ಉದ್ದೇಶ, ರಾಗ, ತಾಳ ಮುಂತಾಗಿ ಅದರ ಹಿನ್ನೆಲೆಯನ್ನು ವಿವರಿಸುವುದು. ವಾದ್ಯಗಾರರೂ ಸಹ ಸಾಹಿತ್ಯವನ್ನು ಕಂಠಪಾಠ ಮಾಡುವಂತೆ ನಿರ್ದೇಶಿಸುವುದು.
7. ಗಾಯನದಲ್ಲಿ ಶಾರೀರ ಸಂಸ್ಕರಣವನ್ನು ಗಮನಿಸಿ ಪಾಠ ಹೇಳುವುದು.
8. ವಿದ್ಯಾರ್ಥಿಗಳು ಸಂಗೀತ ಲಿಪಿ ಕ್ರಮದೊಡನೆ ಕಲಿತಿರುವ ರಚನೆಗಳನ್ನು ಬರೆಯುವ ಅಭ್ಯಾಸ ಮಾಡಿಸುವುದು.
9. ವಿದ್ಯಾರ್ಥಿಗಳು ಗಾಯಕರಾಗಲಿ ವಾದಕರಾಗಲಿ ರಚನೆಗಳನ್ನು ಕಂಠಪಾಠ ಮಾಡುವಂತೆ ಸೂಚಿಸುವುದು.
10. ವಾದ್ಯಗಳಲ್ಲಿ ಪ್ರತಿಯೊಂದು ವಾದ್ಯಕ್ಕೆ ವಿಶಿಷ್ಟ್ಯವಾಗಿರುವ ಗುಣವನ್ನು ಉಳಿಸುವಂತೆ ಪಾಠಕ್ರಮವನ್ನು ರೂಪಿಸುವುದು.
11. ಸಂಗೀತಕ್ಕೆ ಸಂಬಂಧಪಟ್ಟ ಚರ್ಚೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಲು ವಿದ್ಯಾರ್ಥಿಗಳನ್ನು ಉತ್ತೇಜಿಸುವುದು.
12. ಅಭ್ಯಾಸಗಾನದ ರಚನೆಗಳಿಗೆ ಶುದ್ಧವಾಗಿ ಸ್ವರಸ್ಥಾನಗಳು ನುಡಿಯುವಂತೆ ಗಮನವೀಯುವುದು.
13. ಬೋಧಕರು ವಾದ್ಯಗಳನ್ನು ಅಭ್ಯಾಸಮಾಡುವ ವಿದ್ಯಾರ್ಥಿಗಳಿಗೆ ತಾಳವನ್ನು ತೊಡೆಯ ಮೇಲೆ ಕೈಗಳಿಂದ ಹಾಕುವ ಅಭ್ಯಾಸವನ್ನು ಮಾಡಿಸಬೇಕು. ಈ ರೀತಿ ವಿದ್ಯಾರ್ಥಿಗಳು ತಾಳದ ಕಡೆಗೆ ಹೆಚ್ಚಿನ ಗಮನವೀಯಲು ಒತ್ತಾಯಪಡಿಸಬೇಕು.
14. ಸಂಗೀತ ವಿದ್ವಾಂಸರ ಕಚೇರಿಗಳನ್ನು ಕೇಳುವ ಅಭಿರುಚಿಯನ್ನು ಬೆಳೆಸುವುದು.
15. ಸಂಗೀತ ಕಲಿಕೆಗೆ ಸಂಬಂಧಿಸಿದ ಸೋದಾಹರಣ ಭಾಷಣಗಳನ್ನು ಕೇಳಿ, ಮನನಮಾಡಲು ಸೂಚನೆ ನೀಡುವುದು.

ಬೆಂಗಳೂರು

**ವಸಂತ ಮಾಧವಿ**
ಪಠ್ಯಪುಸ್ತಕ ಪರಿಷ್ಕರಣಾ ಸಮಿತಿ,
ಬೆಂಗಳೂರು

# ಪರಿವಿಡಿ

## ಶಾಸ್ತ್ರವಿಭಾಗ

### ಪತ್ರಿಕೆ - I



## ಲಕ್ಷ್ಯ ಸಂಗೀತ

### ಪತ್ರಿಕೆ - 1

ಕ್ರಸಂ

## ಪತ್ರಿಕೆ -2

## ಶಾಸ್ತ್ರ ವಿಭಾಗ,

## ಅಧ್ಯಾಯ - 1

# ಸಂಗೀತದ ಹಿರಿಮೆ

### ಕಲೆ ಮತ್ತು ಲಲಿತಕಲೆಗಳು

ಮಾನವ ತನ್ನ ಭಾವನೆಯನ್ನು ಅಭಿವ್ಯಕ್ತಪಡಿಸುವ ಮಾಧ್ಯಮವೇ ಕಲೆ. ಕಲೆಯು ಮಾನವನ ಮನಸ್ಸನ್ನು ಸಂಸ್ಕರಿಸುತ್ತದೆ. ಕಲೆಯ ಮೂಲ, ಪ್ರಕೃತಿ. ಪ್ರಕೃತಿಯಲ್ಲಿ ಲೀನವಾಗಿದ್ದ ನಾನಾ ಧ್ವನಿ ವಿಶೇಷಗಳು ಪಶು ಪಕ್ಷಿಗಳ ಕೂಗುವಿಕೆ, ಸಮುದ್ರದ ಮೊರೆತ ಇತ್ಯಾದಿ, ಮಾನವನಲ್ಲಿ ಸುಪ್ತವಾಗಿದ್ದ ಸಂಗೀತವನ್ನು ಸಚೇತನಗೊಳಿಸುವ ಪರಿಕರಗಳಾಯಿತು. ಅರವತ್ತನಾಲ್ಕು ಕಲೆಗಳನ್ನು ಭಾರತೀಯ ಪುರಾತನ ಗ್ರಂಥಗಳು ತಿಳಿಸುತ್ತವೆ. ಇವುಗಳನ್ನು ಸ್ಥೂಲವಾಗಿ ಲಲಿತಕಲೆ, ವಿಜ್ಞಾನಕಲೆ, ವಾಣಿಜ್ಯ ಕಲೆ ಮುಂತಾಗಿ ವಿಂಗಡಿಸಬಹುದು. ಲಲಿತ ಕಲೆಯು ಸಂಸ್ಕಾರ ಮತ್ತು ಪ್ರತಿಭೆಯ ಮೂಲಕ ರೂಪುಗೊಳ್ಳುತ್ತದೆ. ಸಂಗೀತ, ನೃತ್ಯ, ಸಾಹಿತ್ಯ, ನಾಟಕ, ಶಿಲ್ಪ, ಚಿತ್ರ ಮುಂತಾದವು ಲಲಿತ ಕಲೆಗಳೆನಿಸುತ್ತವೆ.

ಮಾನವ ತನ್ನ ಬದುಕನ್ನು ನಿರ್ವಹಿಸಲು ಉದ್ಯೋಗವನ್ನು ಅವಲಂಬಿಸುವನು. ಮನೋರಂಜನೆಗಾಗಿ ಕ್ರೀಡೆಗಳನ್ನು ಆಡುವನು. ವ್ಯಕ್ತಿತ್ವವನ್ನು ಕಲಾತ್ಮಕವಾಗಿಸಿಕೊಂಡು ಆಧ್ಯಾತ್ಮದತ್ತ ಸಾಗಲು ಲಲಿತ ಕಲೆಗಳನ್ನು ಮಾಧ್ಯಮವಾಗಿ ಬಳಸಿಕೊಳ್ಳುವನು. ಲಲಿತ ಕಲೆಯನ್ನು ಸಾಧಿಸಿಕೊಂಡಾಗ, ಆ ಕಲೆಯು ಅವನ ಚಿತ್ತಕ್ಕೆ ಆನಂದವನ್ನುಂಟುಮಾಡುವುದಲ್ಲದೆ, ಪರಿಪೂರ್ಣತೆಯ ಕಡೆಗೆ ಒಯ್ಯುತ್ತದೆ.

### ಸಂಗೀತ

ಲಲಿತ ಕಲೆಗಳಲ್ಲಿ ಸಂಗೀತವು ಪ್ರಥಮ ಸ್ಥಾನವನ್ನು ಪಡೆಯುತ್ತದೆ. ನಾದದಅನುಸಂಧಾನದಿಂದ ಸೌಂದರ್ಯವನ್ನು ಕಿವಿಯ ಮೂಲಕ ಹರಿಸಿ, ಲೌಕಿಕ ಪ್ರಪಂಚದ ಜಂಜಾಟವನ್ನು ಮರೆಸಿ, ಕಲಾವಿದ ಮತ್ತು ಶ್ರೋತೃವಿನ ಹೃದಯವನ್ನು ತಣಿಸುವುದೇ ಸಂಗೀತ. ಗೀತವೆಂದರೆ ಹಾಡು, ಸಂಗೀತವೆಂದರೆ ಒಳ್ಳೆಯ ಹಾಡು. ಕಿವಿಗೆ ಹಿತವನ್ನುಂಟುಮಾಡಿ, ಹೃದಯವನ್ನು ಮುಟ್ಟಿ ಮಾನಸಿಕ ಉದ್ರೇಕವನ್ನು ಶಮನಗೊಳಿಸುತ್ತದೆ.

### ಸಂಗೀತ ಕಲೆಯ ಉಗಮ ಮತ್ತು ಬೆಳವಣಿಗೆ

ಭಾರತೀಯ ಸಂಗೀತವು ವೇದ ಜನಿತವಾದುದು. ಸಾಮವೇದವೇ ಸಂಗೀತದ ಮೂಲ. ಅಲ್ಲದೆ ಶಾಸ್ತ್ರೀಯ ಸಂಗೀತವು, ಭಕ್ತಿ ಪ್ರಧಾನವಾದುದು. ತಲ್ಲೀನತೆಯಿಂದ ಪರಮಾತ್ಮನನ್ನು ಗೇಯ ಪ್ರಕಾರಗಳ ಮೂಲಕ ಭಕ್ತಿಯಿಂದ ಆರಾಧಿಸುವಲ್ಲಿ ಸಂಗೀತದ ಪಾತ್ರ ಹಿರಿದು. ಸಿರಿ ಕಂಠದವರು ಗಾಯನದಿಂದಲೂ, ವಾದಕರು ಸಂಗೀತ ವಾದ್ಯಗಳ ವಾದನದಿಂದಲೂ ನಾದೋಪಾಸನೆಯನ್ನು ಮಾಡುವರು. ಸಂಗೀತದ ಜೀವಾಳವೇ ಸುಸ್ವರ ಮತ್ತು ಸುನಾದ. ಸುಸ್ವರ

ಮತ್ತು ಸುನಾದದ ಮೂಲಕ ದೇವರನ್ನು ಅರ್ಚಿಸಿ, ಮೋಕ್ಷಮಾರ್ಗವನ್ನು ಹೊಂದುವ ಪ್ರಯತ್ನವು ಹಿಂದಿನಿಂದಲೂ ಆಚರಣೆಗೆ ಬಂದಿದೆ.

ಭಾರತದಲ್ಲಿ ದೇವಾಲಯಗಳೇ ಸಂಗೀತವನ್ನು ಪೋಷಿಸುವ ಹಾಗೂ ಬೆಳೆಸುವ ಕೇಂದ್ರಗಳಾಗಿದ್ದವು. ನಮ್ಮ ದೇಶದಲ್ಲಿ ಧರ್ಮಪ್ರಚಾರಕರು, ತತ್ವೋಪದೇಶಿಗಳು, ಸಂಗೀತ ಮಾಧ್ಯಮದ ಮೂಲಕವೇ ಉಪದೇಶಗಳನ್ನು ನೀಡುತ್ತ ಬಂದಿರುವುದು ಸಾರ್ವಕಾಲಿಕ ಹಾಗೂ ಸರ್ವವಿಧಿತವಾದ ಅಂಶವಾಗಿದೆ. ಹೀಗೆ ಸಂಗೀತವು ಆಧ್ಯಾತ್ಮಿಕತೆಯ ಒಂದು ಮುಖವಾಗಿ ಮುನ್ನಡೆಯುತ್ತಿದೆ.

ಸಂಗೀತವು ನೃತ್ಯ, ಶಿಲ್ಪ, ಚಿತ್ರ, ಜ್ಯೋತಿಷ್ಯ ಮೊದಲಾದ ಶಾಸ್ತ್ರಗಳೊಂದಿಗೆ ಪರಸ್ಪರ ಸಂಬಂಧವನ್ನು ಹೊಂದಿದೆ. ಸಂಗೀತವಿಲ್ಲದೆ ನೃತ್ಯ ಪ್ರದರ್ಶನವಿಲ್ಲ. ಇತರ ಕಲೆಗಳಲ್ಲಿ ಸಂಗೀತವು ಆ ಕಲೆಗಳಲ್ಲಿಯೇ ಒಂದಲ್ಲ ಒಂದು ರೀತಿಯಲ್ಲಿ ಹಾಸುಹೊಕ್ಕಾಗಿದ್ದು, ರಸಿಕನ ಅನುಭವಕ್ಕೆ ಮಾತ್ರ ಸಿಲುಕುತ್ತದೆ.

## ಸಂಗೀತ ಮತ್ತು ವಿಜ್ಞಾನ

ಸಂಗೀತ ಕಲೆಯು ವೈಜ್ಞಾನಿಕ ಹಿನ್ನೆಲೆಯಲ್ಲೇ ಬೆಳೆದು ಬಂದಿದೆ. ಮಾನವನ ಪ್ರತಿಯೊಂದು ಚಲನವಲನಗಳು ವೈಜ್ಞಾನಿಕವಾಗಿ ವ್ಯವಸ್ಥಿತವಾಗಿದ್ದು, ಲಯಬದ್ಧವಾಗಿವೆ. ನಮ್ಮ ಅಂಗಾಂಗಳೂ ಸಹ ಲಯದಿಂದಲೇ ಕೂಡಿ ಸ್ಪಂದಿಸುವುದನ್ನು ಅರಿತಿದ್ದೇವಲ್ಲವೇ? ಅಂತೆಯೇ ಸಂಗೀತಕ್ಕೂ ಶರೀರಶಾಸ್ತ್ರಕ್ಕೂ ಇರುವ ಸಂಬಂಧ, ಸಂಗೀತ ಮತ್ತು ಭೌತಶಾಸ್ತ್ರ, ಸಂಗೀತ ಮತ್ತು ಗಣಿತ ಶಾಸ್ತ್ರ, ಸಂಗೀತ ಮತ್ತು ಮನೋವಿಜ್ಞಾನ, ಹೀಗೆ ಹಲವಾರು ವಿಧಗಳಲ್ಲಿ ವೈಜ್ಞಾನಿಕವಾಗಿ ಬೆಳೆಯುತ್ತಿರುವ ಸಂಗೀತದ ಅಭ್ಯಾಸವು ಪ್ರತಿಯೊಬ್ಬರಿಗೂ ಅವಶ್ಯಕವೆನಿಸುವುದಲ್ಲವೇ? ಇದೇ ಅಲ್ಲದೆ ಸಂಗೀತಕ್ಕೂ ಸಮಾಜ ಶಾಸ್ತ್ರಕ್ಕೂ ನಿಕಟವಾದ ಬಾಂಧವ್ಯವಿದೆ. ಈ ರೀತಿಯಾಗಿ ಸಂಗೀತವು ಹೇಗೆ ವೈಜ್ಞಾನಿಕವಾಗಿ ಮುನ್ನಡೆಯುತ್ತಿದೆ ಎಂಬುದನ್ನು ಸ್ಥೂಲವಾಗಿ ತಿಳಿಯೋಣ.

## ಸಂಗೀತ ಮತ್ತು ಶರೀರ ಶಾಸ್ತ್ರ

ಮಾನವನ ಶರೀರದ ಬೆಳವಣಿಗೆಯಲ್ಲಿ ಸಂಗೀತದ ಪಾತ್ರವು ಹಿರಿದು. ಶ್ವಾಸಕೋಶಗಳ ಆರೋಗ್ಯಕರ ಬೆಳವಣಿಗೆಗೆ, ಸಬಲವಾದ ಹೃದಯಕ್ಕೆ, ಸಮಸ್ಥಿತಿಯಲ್ಲಿರುವ ಮಾನಸಿಕ ಚೈತನ್ಯಕ್ಕೆ, ನರನಾಡಿಗಳ ಚಲನೆಗೆ, ಸಂಗೀತ ಸಾಧನೆಯು ಸಹಕರಿಸುತ್ತದೆ ಎಂದರೆ ಆಶ್ಚರ್ಯವೆನಿಸುವುದಲ್ಲವೇ ! ಒಟ್ಟಿನಲ್ಲಿ ಹೇಳುವುದಾದರೆ ಮನುಷ್ಯನ ದೈಹಿಕ ಮತ್ತು ಮಾನಸಿಕ ಆರೋಗ್ಯವನ್ನು ಹತೋಟಿಯಲ್ಲಿಡುವ ಸುಲಭ ಮಾರ್ಗವೆಂದರೆ ಸಂಗೀತ ಅಭ್ಯಾಸ.

ಪ್ರಕೃತಿದತ್ತವಾದ ಮಾನವ ಶರೀರದ ಹಲವಾರು ಅಂಗಗಳು ಮುಖ್ಯವಾಗಿ ಶಾರೀರ, ಶ್ರವಣೇಂದ್ರಿಯ, ಶ್ವಾಸಕೋಶಗಳನ್ನು ಅಧಿಕೃತವಾಗಿ ಬಳಸದಿದ್ದಲ್ಲಿ, ಅವುಗಳ ಶಕ್ತಿಯು ಕ್ರಮೇಣ ಕುಂದುತ್ತಾ ಬಂದು, ನಶಿಸಿ ಹೋಗಲೂಬಹುದು. ಈ ಕಾರಣದಿಂದಾಗಿ ಸಂಗೀತ ಕಲಾಭ್ಯಾಸಿಗೆ ಶಾರೀರ ನಷ್ಟವಾಗುವುದಲ್ಲದೇ, ಅವನ ದೈಹಿಕ

ಮತ್ತು ಮಾನಸಿಕ ಆರೋಗ್ಯಕ್ಕೇ ಕೊರತೆಯಾಗಬಹುದು. ಈ ನಿಟ್ಟಿನಲ್ಲಿ ಸಂಗೀತ ಕಲೆಯು ಪ್ರತಿಯೊಬ್ಬರಿಗೂ ಅವಶ್ಯಕವೆನಿಸುತ್ತದೆ.

## ಸಂಗೀತ ಮತ್ತು ಭೌತಶಾಸ್ತ್ರ

ನಾದವು ಭೌತಶಾಸ್ತ್ರಕ್ಕೆ ಸಂಬಂಧಪಟ್ಟ ವಿಷಯ. ಸಂಗೀತಕ್ಕೆ ನಾದವೇ ಮೂಲ. ಹೀಗಾಗಿ ನಾದೋತ್ಪತ್ತಿ, ಸ್ವರಸ್ಥಾನಗಳು, ಸ್ಥಾಯಿ ಸ್ವರದ ಸೂಕ್ಷ್ಮಶ್ರುತಿಗಳು, ವಾದ್ಯಗಳ ರಚನೆ, ವಾದ್ಯಗಳ ನಾದದ ಗುಣಮಟ್ಟ ಇವೇ ಮುಂತಾದ ವಿಷಯಗಳು ಭೌತಿಕ ಶಾಸ್ತ್ರಕ್ಕೂ ಮತ್ತು ಸಂಗೀತಕ್ಕೂ ಸಂಪರ್ಕ ಕಲ್ಪಿಸುತ್ತವೆ. ಇವಲ್ಲದೆ ಸಂಗೀತ ಪ್ರಸಾರ ಕಾರ್ಯಕ್ಕೆ ನೆರವಾಗುವ ಧ್ವನಿವರ್ಧಕ ಯಂತ್ರ, ಧ್ವನಿ ಮುದ್ರಣ ಯಂತ್ರ, ರೇಡಿಯೊ, ಇವೇ ಮುಂತಾದ ಸಾಧನಗಳು ಭೌತಶಾಸ್ತ್ರಕ್ಕೆ ಸಂಬಂಧಿಸಿರುವುದನ್ನು ಗಮನಿಸಬೇಕು. ಇದಕ್ಕಿಂತ ಹೆಚ್ಚಾಗಿ ಸಂಗೀತವನ್ನು ಧ್ವನಿಮುದ್ರಿಸುವ ಸ್ಟೂಡಿಯೋ ಅಥವಾ ಧ್ವನಿ ಮುದ್ರಣ ಕೊಠಡಿಗಳು, ಪ್ರತಿಧ್ವನಿಯು ಬರದಂತಹ ಸಂಗೀತ ಸಭಾಂಗಣಗಳು, ಗ್ರಾಮೋಫೋನ್ ಇವುಗಳೆಲ್ಲವೂ ಭೌತವಿಜ್ಞಾಕ್ಕೆ ಸಂಬಂಧಪಟ್ಟ ವಿಷಯಗಳೇ ಆಗಿವೆ.

## ಸಂಗೀತ ಮತ್ತು ಗಣಿತಶಾಸ್ತ್ರ

ಉಸಿರು ಒಡಲಿನಲ್ಲಿರುವಂತೆ ತಾಳವು ಸಂಗೀತದಲ್ಲಿ ಅಡಕವಾಗಿರುವುದು, ಉಸಿರಿಲ್ಲದೆ ಸಜೀವ ವಸ್ತುಗಳಿಲ್ಲ. ತಾಳವಿಲ್ಲದೆ ಸಂಗೀತವಿಲ್ಲ. ತಾಳವಿದ್ದಲ್ಲಿ ಗಣಿತವು ಇದ್ದೇ ಇರುವುದು. ತಾಳದ ವ್ಯವಹಾರದಿಂದ ಕಲಾವಿದನ ಬುದ್ಧಿ ಮತ್ತೆ ಹೆಚ್ಚು ತೀಕ್ಷ್ಣವಾಗುವುದು.

## ಸಂಗೀತ ಮತ್ತು ಮನೋವಿಜ್ಞಾನ

ಸಂಗೀತವು ಮನಸ್ಸಿಗೆ ನೆಮ್ಮದಿಯನ್ನು ನೀಡುವ ಲಲಿತ ಕಲೆಗಳಲ್ಲಿ ಒಂದಾಗಿದೆ. ಮಾನಸಿಕ ಒತ್ತಡಗಳನ್ನು ಸಂಗೀತದ ಮೂಲಕ ಪರಿಹರಿಸುವ ಪ್ರಯೋಗಗಳು ಮನೋವಿಜ್ಞಾನದಲ್ಲಿ ಇತ್ತೀಚೆಗೆ ಅಧಿಕ ಪ್ರಮಾಣದಲ್ಲಿ ನಡೆಯುತ್ತಿವೆ. ಮಾನಸಿಕ ಬೆಳವಣಿಗೆಯು ಪುಷ್ಟಿಕರವಾದಾಗ, ಶಿಸ್ತು, ಸಂಗೀತ ಅಭ್ಯಾಸಿಗಳಲ್ಲಿ ತಾನಾಗಿಯೇ ಏರ್ಪಡುವುದು, ಜೀವನವು ಸುಖಮಯವಾಗುವುದು.

## ಸಂಗೀತ ಮತ್ತು ಸಮಾಜ ಶಾಸ್ತ್ರ

ಸಂಗೀತವು ಸಮಾಜದ ಅವಿಭಾಜ್ಯ ಅಂಗವೆಂದೇ ಪರಿಗಣಿಸಲಾಗಿದೆ. ಜಾತಿ, ಮತ, ಲಿಂಗ, ಅಂತಸ್ತು ಭಾಷಾ ಭೇದಗಳಿಲ್ಲದ ಭಾವೈಕ್ಯತೆಯನ್ನು ಸಾಧಿಸುವ ಕಲೆ ಸಂಗೀತ. ಸಂಗೀತ ಬಹುಮುಖವಾದುದು. ಶಾಸ್ತ್ರೀಯ ಸಂಗೀತದೊಡನೆ ಸಮಾಜದ ವಿವಿಧ ಜನರ ಅಭಿರುಚಿಗೆ ತಕ್ಕಂತೆ ಆಯಾಯ ಸಮಾಜಕ್ಕೆ ಅನುಗುಣವಾಗಿ ಜಾನಪದ ಸಂಗೀತ, ಸಂಪ್ರದಾಯ ಸಂಗೀತ, ಸುಗಮ ಸಂಗೀತ (ಭಾವ ಗೀತೆ), ನೃತ್ಯ ಸಂಗೀತ, ರಂಗಸಂಗೀತ, ಚಿತ್ರ ಸಂಗೀತ ಹೀಗೆ ಹಲವಾರು ಪ್ರಕಾರಗಳಲ್ಲಿ ಸಂಗೀತವು ಬೆಳೆಯುತ್ತಲಿದೆ.

ಶಾಸ್ತ್ರೀಯ ಸಂಗೀತವು ಇತರ ಸಂಗೀತ ಪ್ರಕಾರಗಳಿಗಿಂತ ಉನ್ನತ ಮಟ್ಟದ್ದಾಗಿದೆ. ಶಾಸ್ತ್ರೀಯ ಸಂಗೀತವು ಸಾಮಾಜಿಕ ಪಿಡುಗುಗಳಾದ ಬಂಡಾಯ, ಉದ್ರೇಕ, ಶೋಷಣೆ ಮೊದಲಾದ ಸಮಸ್ಯೆಗಳನ್ನು ಮೀರಿ ನಿಂತಿದೆ. ಮಾನಸಿಕ ನೆಮ್ಮದಿಕೊಡುವ ಈ ಶಾಸ್ತ್ರೀಯ ಸಂಗೀತದಲ್ಲಿ ಅಂತಹ ಸಮಸ್ಯೆಗಳನ್ನು ಸ್ಪಂದಿಸುವ ರಚನೆಗಳ ಅಗತ್ಯವಿಲ್ಲ. ಶಾಸ್ತ್ರೀಯ ಸಂಗೀತವನ್ನು ಇಂತಹ ಸಾಹಿತ್ಯಕ್ಕೆ ಬಳಸುವ ಅವಶ್ಯಕತೆಯೂ ಇಲ್ಲ. ಏಕೆಂದರೆ ಸಂಗೀತದ ಗುರಿ ಮಾನಸಿಕ ಸೌಖ್ಯ ಮಾತ್ರ.

## ಸಂಗೀತ ಕಲಿಕೆಯ ಮಹತ್ವ

ಸಂಗೀತವನ್ನು ಅಭ್ಯಾಸ ಮಾಡುವುದರಿಂದ ಏಕಾಗ್ರತೆ, ಗ್ರಹಣ ಶಕ್ತಿ, ಸ್ಮರಣ ಶಕ್ತಿ, ಚಿಂತನಶೀಲತೆ, ಸೃಜನಶೀಲತೆ ಹೆಚ್ಚುವುದರಿಂದ ಸಂಗೀತವನ್ನು ಅಭ್ಯಾಸ ಮಾಡುವವರ ಬುದ್ಧಿ ಶಕ್ತಿಯ ಮಟ್ಟವು ವೃದ್ಧಿಗೊಳ್ಳುತ್ತದೆ. ಶಿಸ್ತಿನಿಂದ ಅಭ್ಯಾಸ ಮಾಡಿದರೆ ಮಾತ್ರ ಸಂಗೀತವು ಸಿದ್ಧಿಸುವುದು. ಇದರಿಂದ ಸಂಗೀತ ವಿದ್ಯಾರ್ಥಿಗೆ ತನ್ನ ದಿನಚರಿಯಲ್ಲಿ ಶಿಸ್ತು ಏರ್ಪಡುತ್ತದೆ. ಕಾಠಿಣ್ಯವು ಕಡಿಮೆಯಾಗಿ, ಸಮಾಧಾನವು ಏರ್ಪಟ್ಟು, ಸಂಸ್ಕಾರವಂತರಾಗಲು ಪೂರಕವಾಗುವುದು ಸಂಗೀತ.

ಇತರೆ ವಿಷಯಗಳನ್ನು ಅಭ್ಯಾಸ ಮಾಡುವಾಗ ಉಂಟಾಗುವ ಬೇಸರಿಕೆಯನ್ನು ತೊಲಗಿಸಲು ಹಾಗೂ ಮೆದುಳಿಗೆ ವಿಶ್ರಾಂತಿ ದೊರಕುವಂತೆಮಾಡಲು ಲಲಿತಕಲೆ ಸಹಕರಿಸುವುದರಿಂದ ಸಂಗೀತಕ್ಕೆ ಹೆಚ್ಚಿನ ಆದ್ಯತೆ ಇದೆ. ಸಂಗೀತವನ್ನು ಯಾವ ಕಾಲಕ್ಕೂ ಯಾವ ದೇಶದಲ್ಲೂ, ಯಾವ ವಯಸ್ಸಿನಲ್ಲಿಯೂ ಹಾಡಿಕೊಳ್ಳಲು ಅಥವಾ ನುಡಿಸಿಕೊಳ್ಳಲು ಅನುಕೂಲವಾಗುವುದರಿಂದ ಲಲಿತ ಕಲೆಗಳಲ್ಲಿ ಸಂಗೀತಕ್ಕೆ ಹೆಚ್ಚಿನ ಪ್ರಾಶಸ್ತ್ಯವಿದೆ.

ಒಟ್ಟಿನಲ್ಲಿ ಹೇಳುವುದಾದರೆ ಸಂಗೀತವು ಮಾನವನನ್ನು ಮಾನವತ್ವದಿಂದ ಅಮರತ್ವಕ್ಕೆ ಕೊಂಡೊಯ್ಯುವ ಸುನಾದದಿಂದ ಕೂಡಿದ ಮಧುರವಾದ ಲಲಿತ ಕಲೆ. ಈ ಹಿರಿಮೆ ಸಂಗೀತದ್ದಾಗಿದೆ.



# ಅಧ್ಯಾಯ - 2

## ಭಾರತೀಯ ಸಂಗೀತ ಪದ್ಧತಿಗಳು

ವಿಶ್ವದಲ್ಲಿ ಪ್ರತಿಯೊಂದು ರಾಷ್ಟ್ರವೂ ತನ್ನದೇ ಆದ ಒಂದು ಸಂಗೀತ ಪದ್ಧತಿಯನ್ನು ಬೆಳೆಸಿಕೊಂಡು ಬಂದಿದೆ. ಆದರೆ ಅದು ಶಾಸ್ತ್ರೀಯ ಸಂಗೀತವೇ ಆಗಬೇಕೆಂಬ ನಿಯಮವಿಲ್ಲ. ಇಂದು ಮೂರು ಮುಖ್ಯವಾದ ಶಾಸ್ತ್ರೀಯ ಸಂಗೀತ ಪದ್ಧತಿಗಳು ಮಾತ್ರ ಬಳಕೆಯಲ್ಲಿವೆ. ಅವು ಪಾಶ್ಚಾತ್ಯ ಸಂಗೀತ, ಭಾರತೀಯ ಸಂಗೀತವೆನಿಸುವ ಕರ್ನಾಟಕ ಸಂಗೀತ ಮತ್ತು ಹಿಂದೂಸ್ಥಾನಿ ಸಂಗೀತ ಪದ್ಧತಿಗಳು.

ನಮ್ಮದೇಶದಲ್ಲಿ ಎರಡು ಪ್ರಮುಖವಾದ ಶಾಸ್ತ್ರೀಯ ಸಂಗೀತ ಪದ್ಧತಿಗಳು ಬಳಕೆಯಲ್ಲಿರುವುದು ಹೆಮ್ಮೆಯ ವಿಷಯ. ಇವುಗಳನ್ನು ಕ್ರಮವಾಗಿ ಕರ್ನಾಟಕ ಸಂಗೀತ ಪದ್ಧತಿ ಮತ್ತು ಹಿಂದೂಸ್ಥಾನಿ ಸಂಗೀತ (ದಕ್ಷಿಣಾದಿ ಪದ್ಧತಿ ಮತ್ತು ಉತ್ತರಾದಿ ಅಥವಾ ಔತ್ತರೇಯ) ಪದ್ಧತಿಗಳೆಂದೂ ಕರೆಯುವುದು ವಾಡಿಕೆ.

ಕರ್ನಾಟಕ ಶಾಸ್ತ್ರೀಯ ಸಂಗೀತ ಪದ್ಧತಿಯು ಅಂದಿನಿಂದ ಇಂದಿನವರೆಗೆ ಬಹುಮುಖವಾಗಿ ಬೆಳೆಯುತ್ತಾ ಬಂದರೂ, ಏಕಮುಖವಾಗಿ ತನ್ನ ಪದ್ಧತಿಯನ್ನು ಉಳಿಸಿಕೊಂಡು ಬರುತ್ತಿದೆ.

ಹಿಂದೂಸ್ಥಾನಿ ಶಾಸ್ತ್ರೀಯ ಸಂಗೀತ ಪದ್ಧತಿಯಲ್ಲಿ ಹಲವು ಶೈಲಿಗಳು ಘರಾನವೆಂಬ ಹೆಸರಿನಿಂದ ರೂಪುಗೊಂಡಿದೆ.

ಭಾರತೀಯ ಸಂಗೀತದ ಕವಲುಗಳಾದ ಎರಡು ಪದ್ಧತಿಗಳಲ್ಲೂ ಸಾಮ್ಯವು ಕಂಡು ಬಂದರೂ, ವ್ಯತ್ಯಾಸಗಳನ್ನು ಗುರುತಿಸಬಹುದು. ಇವುಗಳಲ್ಲಿ ಕಂಡು ಬರುವ ಸಾಮ್ಯ ಹಾಗೂ ವ್ಯತ್ಯಾಸಗಳನ್ನು ಈ ಕೆಳಗೆ ತಿಳಿಸಲಾಗಿದೆ.

### ಕರ್ನಾಟಕ ಮತ್ತು ಹಿಂದೂಸ್ಥಾನಿ ಸಂಗೀತ ಪದ್ಧತಿಗಳಲ್ಲಿರುವ ಸಾಮ್ಯ.

1. ಸಂಗೀತಕ್ಕೆ ಸಪ್ತ ಸ್ವರಗಳೇ ಅಧಾರ.

2. ಸ್ವರಗಳ ಬಳಕೆ ಹಾಗೂ ಸಂಕೇತಗಳೂ ಒಂದೇ ಆಗಿವೆ. ಸರಿಗಮಪದನಿ ಎಂದಿದೆ.

3. ಮೂರು ಸ್ಥಾಯಿಗಳಾದ ಮಂದ್ರ, ಮಧ್ಯ, ತಾರಗಳು ಎರಡು ಪದ್ಧತಿಗಳಲ್ಲಿವೆ.

4. ತಂಬೂರಿಯು ಶ್ರುತಿವಾದ್ಯವಾಗಿದೆ.

5. ಸಂಗೀತ ರಚನೆಗಳು, ಮನೋಧರ್ಮ ಸಂಗೀತವು ಎರಡು ಪದ್ಧತಿಗಳಲ್ಲಿ ಬಳಕೆಯಲ್ಲಿದ್ದು, ಸಭಾಗಾನವು ಅಂದರೆ ಸಂಗೀತ ಕಛೇರಿಗಳು, ಗಾಯನ ವಾದನಗಳೆರಡರಲ್ಲೂ ನಡೆಯುತ್ತವೆ.

## ಕರ್ನಾಟಕ ಮತ್ತು ಹಿಂದೂಸ್ಥಾನಿ ಸಂಗೀತ ಪದ್ಧತಿಗಳಲ್ಲಿ ಕಂಡುಬರುವ ಸಾಮ್ಯತೆ -ವ್ಯತ್ಯಾಸಗಳು

| ಕರ್ನಾಟಕ ಸಂಗೀತ ಪದ್ಧತಿ | ಹಿಂದೂಸ್ಥಾನಿ ಸಂಗೀತ |
|---|---|
| 1. ಒಂದು ಸ್ಥಾಯಿಯಲ್ಲಿ ಹದಿನಾರು ಸ್ವರಗಳಿವೆ. | 1. ಒಂದು ಸ್ಥಾಯಿಯಲ್ಲಿ ಹನ್ನೆರಡು ಸ್ವರಗಳಿವೆ. |
| 2. ರಾಗ ವಿಭಜನೆಯಲ್ಲಿ ಜನಕ ಮತ್ತು ಜನ್ಯ ಪದ್ಧತಿಯನ್ನು ಹೊಂದಿದೆ. | 2. ರಾಗ ವಿಭಜನೆಯಲ್ಲಿ ರಾಗ - ರಾಗಿಣಿ ಮತ್ತು ಥಾಟ್ ಪದ್ಧತಿಗಳನ್ನು ಹೊಂದಿದೆ. |
| 3. ರಾಗ ಸ್ವರೂಪದಲ್ಲಿ ಸ್ಥೂಲವಾಗಿ ಸಾಮ್ಯತೆಯಿದ್ದರೂ ಹೆಸರುಗಳು ಭಿನ್ನವಾಗಿವೆ.<br>ಉದಾ: ಮೋಹನ, ಹಿಂದೋಳ, ಮಾಯಾಮಾಳವಗೌಳ, ಚಕ್ರವಾಕ. ಮುಂತಾದವು. | 3. ರಾಗ ಸ್ವರೂಪದಲ್ಲಿ ಸ್ಥೂಲವಾಗಿ ಸಾಮ್ಯತೆಯಿದ್ದರೂ ಹೆಸರುಗಳು ಭಿನ್ನವಾಗಿವೆ.<br>ಉದಾ: ಭೂಪ್, ಮಾಲ್‌ಕೌನ್ಸ್, ಭೈರವ್, ಅಹಿರ್ ಭೈರವ್ ಮುಂತಾದವು. |
| 4. ತಾಳಗಳಲ್ಲಿ ಸುಳಾದಿ ಸಪ್ತತಾಳಗಳು ಮತ್ತು ಛಾಪು ತಾಳಗಳು ರೂಢಿಯಲ್ಲಿವೆ. | 4. ತಾಳಗಳಲ್ಲಿ ತ್ರಿತಾಲ್, ಚೌತಾಲ್, ಝಪ್‌ತಾಲ್, ಮುಂತಾದ ತಾಳಗಳು ಬಳಕೆಯಲ್ಲಿವೆ. |
| 5. ತಾಳಗಳನ್ನು ಕ್ರಿಯೆಯ ಮೂಲಕ ಎಣಿಸಿ ತೋರಿಸಲಾಗುತ್ತದೆ. | 5. ತಾಳವನ್ನು ಕ್ರಿಯೆಯ ಮೂಲಕ ತೋರಿಸದೆ ಎಣಿಕೆಯನ್ನು ತಬಲದ ಸಾಥಿಯ ಮೂಲಕ ನಿರ್ವಹಿಸಲಾಗುತ್ತದೆ. |
| 6. ಗೀತ, ಜತಿಸ್ವರ, ಸ್ವರಜತಿ, ವರ್ಣ,ಕೃತಿ, ಕೀರ್ತನೆ, ಪದ, ಜಾವಳಿ, ತಿಲ್ಲಾನ ಮುಂತಾದ ಸಂಗೀತ ರಚನೆಗಳಿವೆ. | 6. ದ್ರುಪದ್, ಧಮಾರ್, ತರಾನ, ಖ್ಯಾಲ್, ಟಪ್ಪ, ಠುಮ್ರಿ, ಘಜಲ್ ಭಜನ್ ಮುಂತಾದ ಸಂಗೀತ ರಚನೆಗಳನ್ನು ಬಂದೀಷ್ ಎಂದು ಕರೆಯಲಾಗುತ್ತದೆ. |
| 7. ವೀಣೆ, ಗೋಟುವಾದ್ಯ, ಕೊಳಲು, ನಾಗಸ್ವರ, ಕ್ಲಾರಿಯೋನೆಟ್, ವಯೋಲಿನ್,ಮೃದಂಗ, ಡೋಲು, ಡೋಲಕ್, ಘಟ, ಖಂಜರಿ, ಮೋರ್ಚಿಂಗ್, ಜಲತರಂಗ್ ಮುಂತಾದವು ಸಂಗೀತ ವಾದ್ಯಗಳು. | 7. ಸಿತಾರ್, ಬೀನ್, ಸರೋದ್, ದಿಲ್ರುಬಾ, ಸಾರಂಗಿ, ಸಂತೂರ್, ಬಾನ್ಸುರಿ, ಷಹನಾಯ್, ತಬಲ, ಪಖವಾಜ್ ಮುಂತಾದವು. |

ಅಧ್ಯಾಯ - 3

# ಕರ್ನಾಟಕ ಸಂಗೀತದ ಪಾರಿಭಾಷಿಕ ಶಬ್ದಗಳು

**ಶಬ್ದ:** ಎರಡು ಘನ ಪದಾರ್ಥಗಳ ಘರ್ಷಣೆಗಳಿಂದ ಉತ್ಪತ್ತಿಯಾಗುವುದೇ ಶಬ್ಧ

**ನಾದ** :ವ್ಯವಸ್ಥಿತ ಕಂಪನಾವರ್ತಗಳನ್ನು ಹೊಂದಿದ್ದು, ಕಿವಿಗೆ ಹಿತವನ್ನು ಉಂಟುಮಾಡುವ ಶಬ್ಧವೇ ನಾದ.

**ಶ್ರುತಿ** : ಎರಡು ಸ್ವರಗಳ ನಡುವೆ ಇರುವ ಅತಿ ಸೂಕ್ಷ್ಮ ಅಂತರವೇ ಶ್ರುತಿ. ಇಂತಹ ಶ್ರುತಿಗಳು ಒಂದು ಸ್ಥಾಯಿಯಲ್ಲಿ ಇಪ್ಪತ್ತೆರಡು ಎಂದು ಪರಿಗಣಿಸಲಾಗಿದೆ. ಕಂಪನಾವರ್ತಗಳು ಹೆಚ್ಚಿದಂತೆ ಸ್ವರವು ತೀವ್ರವಾಗಿ ಸ್ಥಾಯಿಗಳಾಗಲು ಕಾರಣವಾಗುತ್ತದೆ.

**ಆಧಾರ ಶ್ರುತಿ** : ಗಾಯಕರ ಶಾರೀರ ಹಾಗೂ ವಾದ್ಯಕ್ಕೆ ಅನುಗುಣವಾಗಿ ಆರಿಸಿಕೊಳ್ಳುವ ಆಧಾರ ಸ್ವರವನ್ನು ಆಧಾರ ಶ್ರುತಿ ಎನ್ನುತ್ತಾರೆ.

**ಸ್ವರ** : 'ಸ್ವತೋ ರಂಜಯತಿ ಶ್ರೋತೃಚಿತ್ತಂ ಸ ಸ್ವರಮುಚ್ಯತೇ' (ಸಂಗೀತರತ್ನಾಕರ - ಶಾರ್ಙ್ಗದೇವ.) ತನ್ನಷ್ಟಕ್ಕೆ ತಾನೇ ಕೇಳುವವರ ಮನಸ್ಸಿಗೆ ರಂಜನೆಯನ್ನುಂಟುಮಾಡುವ ಧ್ವನಿಯನ್ನು ಸ್ವರಗಳೆನ್ನಲಾಗುತ್ತದೆ. ಶ್ರುತಿಗಳಿಂದಲೇ ಸ್ವರವಾಗುತ್ತದೆ.ಇಂತಹ ಸ್ವರಗಳು ಏಳು. ಇವುಗಳನ್ನೇ ಸಪ್ತಸ್ವರವೆನ್ನುತ್ತಾರೆ. ಷಡ್ಜ, ರಿಷಭ, ಗಾಂಧಾರ ಮಧ್ಯಮ, ಪಂಚಮ, ಧೈವತ, ನಿಷಾದಗಳೇ ಈ ಏಳು ಸ್ವರಗಳು. ಇವುಗಳ ಸಂಕೇತವು ಕ್ರಮವಾಗಿ ಸ ರಿ ಗ ಮ ಪ ದ ನಿ. ಈ ಸ್ವರಗಳನ್ನು ಎರಡು ಗುಂಪಾಗಿ ವಿಂಗಡಿಸಲಾಗಿದೆ. ಅವೇ ಪ್ರಕೃತಿ ಮತ್ತು ವಿಕೃತಿ ಸ್ವರಗಳು.

**ಪ್ರಕೃತಿ ಸ್ವರ** : ಯಾವುದೇ ಶ್ರುತಿಭೇದಕ್ಕೂ ಒಳಪಡದೆ, ನಿರ್ದಿಷ್ಟವಾಗಿ ಇದ್ದಂತೆ ಇರುವ ಸ್ವರಗಳನ್ನು ಪ್ರಕೃತಿ ಸ್ವರವೆನ್ನುತ್ತಾರೆ. ಇವು ಷಡ್ಜ, ಮತ್ತು ಪಂಚಮ ಸ್ವರಗಳು.

**ವಿಕೃತಿಸ್ವರ** : ಶ್ರುತಿಭೇದ ಹೊಂದುವ ಸ್ವರಗಳನ್ನು ವಿಕೃತಿ ಸ್ವರವೆಂದು ಕರೆಯಲಾಗಿದೆ. ಇವು ರಿಷಭ, ಗಾಂಧಾರ, ಮಧ್ಯಮ, ಧೈವತ ಮತ್ತು ನಿಷಾದ ಸ್ವರಗಳು.

**ಸ್ವರ ಪ್ರಭೇದಗಳು** : ಸ್ವರ ಪ್ರಭೇದಗಳು ವಿಕೃತಿ ಸ್ವರಗಳಿಗೆ ಮಾತ್ರ ಅನ್ವಯಿಸುತ್ತದೆ. ಒಂದು ಸ್ಥಾಯಿಯಲ್ಲಿ ಪ್ರಕೃತಿ ಮತ್ತು ವಿಕೃತಿ ಸ್ವರಗಳು ಸೇರಿ ಹನ್ನೆರಡು ಸ್ವರಸ್ಥಾನಗಳಿವೆ. ಆದರೆ ಕರ್ನಾಟಕ ಸಂಗೀತದಲ್ಲಿ ಮಾತ್ರ ಹನ್ನೆರಡು ಸ್ವರ ಸ್ಥಾನಗಳನ್ನು ಹದಿನಾರು ಸ್ವರಗಳನ್ನಾಗಿ ಮಾರ್ಪಡಿಸಲಾಗಿದೆ.ವಿಕೃತಿ ಸ್ವರಪ್ರಭೇದಗಳ ವಿವರಣೆಯನ್ನು ತಿಳಿದುಕೊಂಡು, ನಂತರ, ಹೇಗೆ ಹನ್ನೆರಡು ಸ್ವರಸ್ಥಾನಗಳನ್ನು ಹದಿನಾರು ಸ್ವರಗಳನ್ನಾಗಿ ಪರಿವರ್ತಿಸಲಾಗಿದೆ ಎಂಬುದನ್ನು ತಿಳಿದುಕೊಳ್ಳೋಣ.

**ವಿಕೃತಿ ಸ್ವರ ಪ್ರಭೇದಗಳು** : ರಿಷಭದಲ್ಲಿ ಮೂರು ವಿಧ : 1) ಶುದ್ಧ ರಿಷಭ, 2) ಚತುಶ್ರುತಿ ರಿಷಭ,

3) ಷಟ್ಶ್ರುತಿ ರಿಷಭ, **ಗಾಂಧಾರದಲ್ಲಿ** ಮೂರು ವಿಧ. 1) ಶುದ್ಧ ಗಾಂಧಾರ, 2) ಸಾಧಾರಣ ಗಾಂಧಾರ, 3) ಅಂತರ ಗಾಂಧಾರ, **ಮಧ್ಯಮದಲ್ಲಿ** ಎರಡು ವಿಧ. 1) ಶುದ್ಧಮಧ್ಯಮ 2) ಪ್ರತಿಮಧ್ಯಮ, **ಧೈವತದಲ್ಲಿ** ಮೂರು ವಿಧ. 1.) ಶುದ್ಧಧೈವತ, 2) ಚತುಶ್ರುತಿ ಧೈವತ 3) ಷಟ್ಶ್ರುತಿ ಧೈವತ. **ನಿಷಾದದಲ್ಲಿ** ಮೂರು ವಿಧ 1) ಶುದ್ಧ ನಿಷಾದ 2.) ಕೈಶಿಕಿ ನಿಷಾದ 3) ಕಾಕಲಿ ನಿಷಾದ.

1. ಷಡ್ಜ
2. ಶುದ್ಧರಿಷಭ
3. ಚತುಶ್ರುತಿ ರಿಷಭ, ಶುದ್ಧ ಗಾಂಧಾರ.
4. ಷಟ್ಶ್ರುತಿ ರಿಷಭ, ಸಾಧಾರಣ ಗಾಂಧಾರ.
5. ಅಂತರ ಗಾಂಧಾರ
6. ಶುದ್ಧ ಮಧ್ಯಮ
7. ಪ್ರತಿ ಮಧ್ಯಮ
8. ಪಂಚಮ
9. ಶುದ್ಧ ಧೈವತ
10. ಚತುಶ್ರುತಿ ಧೈವತ ಶುದ್ಧ ನಿಷಾದ
11. ಷಟ್ಶ್ರುತಿ ಧೈವತ ಕೈಶಿಕಿ ನಿಷಾದ
12. ಕಾಕಲಿ ನಿಷಾದ

### ವಿಕೃತಿ ಸ್ವರ ಪ್ರಭೇದಗಳ ವಿವರಣೆ

ಮೇಲಿನ ಫಲಕಕ್ಕನುಗುಣವಾಗಿ ಹನ್ನೆರಡು ಸ್ವರಸ್ಥಾನಗಳಲ್ಲಿ ಹದಿನಾರು ಸ್ವರಗಳು ಅಡಕವಾಗಿರುವುದನ್ನು ಕಾಣಬಹುದು. 3,4,10,11 ನೇ ಸ್ಥಾನಗಳಲ್ಲಿ, ಒಂದು ಸ್ಥಾನದಲ್ಲಿ ಎರಡು ಸ್ವರಗಳನ್ನು ಹೊಂದಿಸಲಾಗಿದೆ. ಅವು ಚತುಶ್ರುತಿ ಋಷಭ = ಶುದ್ಧ ಗಾಂಧಾರ, ಷಟ್ಶ್ರುತಿ ಋಷಭ = ಸಾಧಾರಣ ಗಾಂಧಾರ, ಚತುಶ್ರುತಿ ಧೈವತ = ಶುದ್ಧ ನಿಷಾದ ಮತ್ತು ಷಟ್ಶ್ರುತಿ ಧೈವತ = ಕೈಶಿಕ ನಿಷಾದ. ಒಂದೇ ಸ್ಥಾನದಲ್ಲಿರುವ ಎರಡು ಸ್ವರಗಳು ಯಾವುದೇ ಒಂದು ರಾಗಕ್ಕೆ ಬರುವಂತಿಲ್ಲ. ಎಪ್ಪತ್ತೆರಡು ಮೇಳ ರಚನೆಗಾಗಿ ಈ ಹನ್ನೆರಡು ಸ್ವರ ಸ್ಥಾನಗಳು ಹದಿನಾರು ಸ್ವರಗಳಾಗಿ ಪರಿವರ್ತಿತವಾದುವು. ರಾಗದ ಸ್ವರೂಪವನ್ನು ಸ್ಥೂಲವಾಗಿ ಪರಿಚಯ ಮಾಡುವಾಗ ಸ್ವರಗಳ ಆರೋಹಣ ಮತ್ತು ಅವರೋಹಣಗಳ ಮೂಲಕ ತಿಳಿಸಲಾಗುತ್ತದೆ.

**ಆರೋಹಣ** : ಸ್ವರಗಳ ಕ್ರಮವಾದ ಏರುವಿಕೆಯನ್ನು ಆರೋಹಣವೆಂದು ಕರೆಯಲಾಗಿದೆ.

ಉದಾ: ಸ ರಿ ಗ ಮ ಪ ದ ನಿ.

**ಅವರೋಹಣ** : ಸ್ವರಗಳ ಕ್ರಮವಾದ ಇಳಿಯುವಿಕೆಯನ್ನು ಅವರೋಹಣವೆಂದು ಕರೆಯಲಾಗಿದೆ.

ಉದಾ : ನಿ ದ ಪ ಮ ಗ ರಿ ಸ.

**ಸ್ಥಾಯಿ** : ಎರಡು ಷಡ್ಜಗಳ ನಡುವೆ ಆರೋಹ ಅವರೋಹಗಳಿಗೆ ಹೊಂದಿಕೊಳ್ಳುವ ಸ್ವರಸಮುದಾಯವೇ ಸ್ಥಾಯಿ.

**ಮಧ್ಯಸ್ಥಾಯಿ** : ಆಧಾರ ಷಡ್ಜದಿಂದ ಮೊದಲುಗೊಂಡು ಆರೋಹಣ ಕ್ರಮದಲ್ಲಿ ನಿಷಾದದವರೆಗೆ ಬರುವ ಸ್ವರಗಳನ್ನು ಮಧ್ಯಸ್ಥಾಯಿ ಎನ್ನಲಾಗಿದೆ. ಉದಾ : ಸ ರಿ ಗ ಮ ಪ ದ ನಿ. ಬರವಣಿಗೆಯಲ್ಲಿ ಈ ಸ್ವರಗಳಿಗೆ ಚುಕ್ಕೆಗಳನ್ನಿಡುವುದಿಲ್ಲ.

**ಮಂದ್ರಸ್ಥಾಯಿ** :ಆಧಾರ ಷಡ್ಜದಿಂದ ಅವರೋಹಣ ಕ್ರಮದಲ್ಲಿ ಬರುವ, ಅಂದರೆ ನಿಷಾದದಿಂದ ಮೊದಲುಗೊಂಡು ಕೆಳಗಿನ ಷಡ್ಜದವರೆಗೆ ಬರುವ ಸ್ವರಗಳನ್ನು ಮಂದ್ರಸ್ಥಾಯಿ ಎನ್ನಲಾಗಿದೆ.ಉದಾ:ನಿ̣ ದ̣ ಪ̣ ಮ̣ ಗ̣ ರಿ̣ ಸ̣ ಬರವಣಿಗೆಯಲ್ಲಿ ಈ ಸ್ವರಗಳ ಕೆಳಗೆ ಚುಕ್ಕೆಗಳನ್ನು ಇಡಲಾಗುತ್ತದೆ.

**ತಾರಸ್ಥಾಯಿ** : ಮಧ್ಯಸ್ಥಾಯಿಯ ಮುಂದಿನ ಷಡ್ಜದಿಂದ ಆರಂಭಿಸಿ ಆರೋಹಣ ಕ್ರಮದಲ್ಲಿ ನಿಷಾದದವರೆಗೆ ಬರುವ ಸ್ವರಗಳನ್ನು ತಾರಸ್ಥಾಯಿ ಎನ್ನಲಾಗಿದೆ. ಮಧ್ಯಸ್ಥಾಯಿಯ ನಿಷಾದದ ನಂತರ ಬರುವ ಷಡ್ಜವನ್ನು ತಾರಷಡ್ಜವೆಂದು ಕರೆಯುತ್ತಾರೆ. ಉದಾ : ಸ̇ ರಿ̇ ಗ̇ ಮ̇ ಪ̇ ದ̇ ನಿ̇ ಬರವಣಿಗೆಯಲ್ಲಿ ತಾರಸ್ಥಾಯಿಯನ್ನು ಸೂಚಿಸಲು ಸ್ವರಗಳ ಮೇಲೆ ಚುಕ್ಕೆಗಳನ್ನಿಡಲಾಗುತ್ತದೆ.

***ನಿಮಗಿದು ತಿಳಿದಿರಲಿ ;*** ಮಂದ್ರಸ್ಥಾಯಿ ಕೆಳಗೆ ಅನುಮಂದ್ರವೆಂಬ ಸ್ಥಾಯಿ (ನಿ̤ ದ̤ ಪ̤ ಮ̤ ಗ̤ ರಿ̤ ಸ̤). ತಾರಸ್ಥಾಯಿ ಮೇಲೆ ಅತಿತಾರವೆಂಬ ಸ್ಥಾಯಿ.( ಸ̈ ರಿ̈ ಗ̈ ಮ̈ ಪ̈ ದ̈ ನಿ̈ ) ಇರುತ್ತದೆ.

ಈ ರೀತಿಯಾಗಿ ಸಂಗೀತದ ಪಾರಿಭಾಷಿಕ ಶಬ್ದಗಳ ಪರಿಚಯವು ಸಂಗೀತಕ್ಕೆ ಸಂಬಂಧಪಟ್ಟ ವಿಷಯಗಳನ್ನು ಅರಿತುಕೊಂಡು ನೆನಪಿನಲ್ಲಿಡಲು ಸಹಕಾರಿಯಾಗುತ್ತದೆ. ಅಲ್ಲದೆ ಪ್ರಯೋಗ ವಿಭಾಗದಲ್ಲಿ ಸಂಗೀತ ರಚನೆಗಳನ್ನು ನಿರೂಪಿಸುವಾಗ ಸ್ಪಷ್ಟವಾಗಿ ರಾಗಗಳ, ತಾಳಗಳ ಚಿತ್ರಣವನ್ನು ಮೂಡಿಸುತ್ತದೆ.

ഋ ❖ ❖❖ ❁❖ ❖❖ ଓ

ಅಧ್ಯಾಯ - 4

## ರಾಗಗಳ ವರ್ಗೀಕರಣ ಮತ್ತು ರಾಗಗಳ ರಾಗಲಕ್ಷಣಗಳು

**ರಾಗ :** ಸಂಗೀತದ ಬೆಳವಣಿಗೆಗೆ ರಾಗವೇ ಮೂಲ. ರಾಗವಿಲ್ಲದೆ ಸಂಗೀತವಿಲ್ಲ. ಯಾವುದೇ ಸಂಗೀತ ಪ್ರಕಾರವು ರೂಪುಗೊಳ್ಳುವುದಕ್ಕೂ, ವಿವಿಧ ಭಾವನೆಗಳನ್ನು ಮೂಡಿಸುವುದಕ್ಕೂ ರಾಗವೇ ಜೀವಾಳ. ಶಾಸ್ತ್ರೀಯ ಸಂಗೀತದಲ್ಲಿ ಪ್ರತಿಯೊಂದು ರಾಗದ ಸ್ವರೂಪವನ್ನು ನಿರ್ಧರಿಸಿ ಅದೇ ಕ್ರಮದಲ್ಲಿ ವಿಸ್ತರಿಸಲಾಗುತ್ತದೆ.

ರಂಜಿಸುವ ಸ್ವರಗಳ ಸಮೂಹವೇ ರಾಗ . ಸಪ್ತಸ್ವರಗಳ ವಿವಿಧ ರೀತಿಯ ಜೋಡಣೆಯಿಂದ ರಾಗಗಳಾಗುತ್ತವೆ. ಇಂತಹ ರಾಗಗಳ ಸಂಖ್ಯೆ ಅಪಾರ . ಭಾರತೀಯ ಎಲ್ಲಾ ಸಂಗೀತ ಪ್ರಕಾರಗಳಿಗೂ ರಾಗವೇ ಆಧಾರ.

**ರಾಗಗಳ ವರ್ಗೀಕರಣ** : ರಾಗಗಳಲ್ಲಿ ಎರಡು ವಿಧ. ಅವು ಜನಕ ಮತ್ತು ಜನ್ಯರಾಗಗಳು.

**ಜನಕರಾಗ** : ಸಪ್ತ ಸ್ವರಗಳು ಆರೋಹ, ಅವರೋಹವೆರಡರಲ್ಲೂ ಸ್ವರಸಂಪೂರ್ಣತೆ, ಸ್ವರಾನುಕ್ರಮತೆ, ಸ್ವರಸಾರೂಪ್ಯತೆಗಳನ್ನು ಹೊಂದಿದ್ದರೆ ಅಂತಹ ರಾಗಗಳನ್ನು ಜನಕ ರಾಗವೆಂದು ಕರೆಯುತ್ತಾರೆ. ಇಂತಹ ಜನಕರಾಗಗಳು ಎಪ್ಪತ್ತೆರಡು. ಉದಾ: ಮಾಯಾಮಾಳವಗೌಳ, ಹರಿಕಾಂಭೋಜಿ, ಕಾಮವರ್ಧಿನಿ, ಮೇಚಕಲ್ಯಾಣಿ ಇತ್ಯಾದಿ.

**ಜನ್ಯರಾಗ** : ಆರೋಹ, ಅವರೋಹ ಅಥವಾ ಎರಡರಲ್ಲೂ ಒಂದು ಅಥವಾ ಹೆಚ್ಚು ಸ್ವರಗಳು ವರ್ಜ್ಯವಾದ ರಾಗಗಳನ್ನು ಜನ್ಯರಾಗವೆನ್ನುತ್ತಾರೆ. ಇವುಗಳಲ್ಲಿ ಎರಡು ವಿಧ. ಅವು ಉಪಾಂಗರಾಗ ಮತ್ತು ಭಾಷಾಂಗ ರಾಗ.

**ಉಪಾಂಗ ರಾಗ** : ಜನಕ ರಾಗದ ಸ್ವರಗಳನ್ನೇ ಹೊಂದಿದ್ದು, ಒಂದು ಅಥವಾ ಎರಡು ಸ್ವರಗಳು ಬಿಟ್ಟುಹೋದಲ್ಲಿ ಅಂತಹ ರಾಗವನ್ನು ಉಪಾಂಗ ರಾಗವೆಂದು ಕರೆಯಲಾಗುತ್ತದೆ. ಉದಾ: ಹಂಸಧ್ವನಿ, ಶ್ರೀರಾಗ.

**ಭಾಷಾಂಗ ರಾಗ** : ಕೆಲವು ರಾಗಗಳು ರಂಜನೆಗಾಗಿ ಪ್ರಯೋಗದಲ್ಲಿ ಅನ್ಯ ಸ್ವರಗಳನ್ನು ಹೊಂದಿರುತ್ತವೆ ಇಂತಹ ರಾಗವನ್ನು ಭಾಷಾಂಗ ರಾಗವೆನ್ನುತ್ತಾರೆ. ಉದಾ: ಬಿಲಹರಿ, ಕಾಂಭೋಜಿ.

**ವಕ್ರರಾಗ** : ರಾಗದ ಆರೋಹಣ ಅಥವಾ ಅವರೋಹಣಗಳಲ್ಲಿ ಸ್ವರಗಳು ಹಿಂದು ಮುಂದಾಗಿ ಸಂಯೋಜಿತವಾಗಿದ್ದಲ್ಲಿ ಅಂತಹ ರಾಗವನ್ನು ವಕ್ರರಾಗವೆನ್ನುತ್ತಾರೆ. ವಕ್ರರಾಗಗಳು ಉಪಾಂಗ ಅಥವಾ ಭಾಷಾಂಗ ಆಗಿರಬಹುದು.

ಉಪಾಂಗ ವಕ್ರರಾಗ - ಉದಾ: ಜನರಂಜನಿ, ಮಾಳವಿ.

ಭಾಷಾಂಗ ವಕ್ರರಾಗ - ಉದಾ: ಆನಂದ ಭೈರವಿ, ಕಾಪಿ.

ರಾಗಗಳನ್ನು ಸಂಪೂರ್ಣ, ಷಾಡವ, ಔಡವ ಎಂಬ ಪ್ರಭೇದಗಳ ಮೂಲಕ ವಿವರಿಸಲಾಗುವುದು.

**ಸಂಪೂರ್ಣ** : ಆರೋಹಣ ಅಥವಾ ಅವರೋಹಣದಲ್ಲಿ ಏಳು ಸ್ವರಗಳಿದ್ದಲ್ಲಿ ಅದು ಸಂಪೂರ್ಣ.

**ಷಾಡವ** : ಆರೋಹಣ ಅಥವಾ ಅವರೋಹಣದಲ್ಲಿ ಆರು ಸ್ವರಗಳಿದ್ದರೆ ಅದು ಷಾಡವ.

**ಔಡವ** : ಆರೋಹಣ ಅಥವಾ ಅವರೋಹಣದಲ್ಲಿ ಐದು ಸ್ವರಗಳಿದ್ದರೆ ಅದು ಔಡವ.

**ಸ್ವರಾಂತರ** : ಆರೋಹಣ ಅಥವಾ ಅವರೋಹಣದಲ್ಲಿ ನಾಲ್ಕು ಸ್ವರಗಳಿದ್ದಲ್ಲಿ ಅದು ಸ್ವರಾಂತರ.




| ನಂ. | ಹೆಸರು | ಆರೋಹಣದ ಸ್ವರಸಂಖ್ಯೆ | ಅವರೋಹಣದ ಸ್ವರಸಂಖ್ಯೆ |
|---|---|---|---|
| 1. | ಔಡವ - ಔಡವ | 5 | 5 |
| 2. | ಔಡವ - ಷಾಡವ | 5 | 6 |
| 3. | ಔಡವ - ಸಂಪೂರ್ಣ | 5 | 7 |
| 4. | ಷಾಡವ - ಔಡವ | 6 | 5 |
| 5. | ಷಾಡವ - ಷಾಡವ | 6 | 6 |
| 6. | ಷಾಡವ - ಸಂಪೂರ್ಣ | 6 | 7 |
| 7. | ಸಂಪೂರ್ಣ- ಔಡವ | 7 | 5 |
| 8. | ಸಂಪೂರ್ಣ- ಷಾಡವ | 7 | 6 |

ಈ ವರ್ಗೀಕರಣವು ರಾಗದ ಲಕ್ಷಣವನ್ನು ತಿಳಿದುಕೊಳ್ಳಲು ಸಹಕಾರಿಯಾಗಿರುವುದಲ್ಲದೆ, ಅಪಾರ ಸಂಖ್ಯೆಯುಳ್ಳ ರಾಗಗಳನ್ನು ಅಧ್ಯಯನ ಮಾಡಿ ಸರಿಯಾಗಿ ಹಾಡಲು ಅಥವಾ ನುಡಿಸಲು ಮತ್ತು ರಾಗದ ಸ್ವರೂಪವನ್ನು ನೆನಪಿನಲ್ಲಿಡಲು ನೆರವಾಗುತ್ತದೆ.

# ರಾಗ ಲಕ್ಷಣ

ಸಂಗೀತವನ್ನು ಶಾಸ್ತ್ರಬದ್ಧವಾಗಿ, ನಿರೂಪಿಸಲು ರಾಗದ ತಿಳುವಳಿಕೆಯು ಅಗತ್ಯ. ಆಯಾ ರಾಗದ ಸ್ವರೂಪವನ್ನು ಖಚಿತಪಡಿಸಿಕೊಳ್ಳಲು, ಆ ರಾಗಕ್ಕೆ ಸೀಮಿತವಾದ ಲಕ್ಷಣದ ಅರಿವು ಅತ್ಯಗತ್ಯ. ಹೀಗೆ ಪ್ರತಿಯೊಂದು ರಾಗಕ್ಕೂ ತನ್ನದೇ ಆದ ಲಕ್ಷಣಗಳುಂಟು. ಈ ರೀತಿ ರಾಗಕ್ಕೆ ಸಂಬಂಧಪಟ್ಟ ವಿಷಯಗಳನ್ನು ರಾಗ ಲಕ್ಷಣದಲ್ಲಿ ವಿವರಿಸಲಾಗುತ್ತದೆ. ಈ ರೀತಿಯಾದ ರಾಗ ಜ್ಞಾನವು ಗಾಯಕ ಮತ್ತು ವಾದಕನಲ್ಲಿದ್ದರೆ ಮಾತ್ರ, ಸಂಗೀತದ ಪ್ರಯೋಗದಲ್ಲಿ ರಾಗವನ್ನು ಶುದ್ಧವಾಗಿ ನಿರೂಪಿಸಲು ಸಾಧ್ಯವಾಗುತ್ತದೆ.

1) ರಾಗ - ಶಂಕರಾಭರಣ — ಆ - ಸ ರಿ ಗ ಮ ಪ ದ ನಿ ಸ̇

ಅವ - ಸ̇ ನಿ ದ ಪ ಮ ಗ ರಿ ಸ

ಜನಕರಾಗ, 29ನೇ ಮೇಳಕರ್ತ, ಈ ರಾಗದಲ್ಲಿ ಬರುವ ಸ್ವರಗಳು

**ಷಡ್ಜ, ಚ. ರಿ ; ಅಂ. ಗಾ ; ಶು. ಮ ; ಪ. ; ಚ. ಧೈ.; ಕಾ. ನಿ.**

2) ರಾಗ - ಹಂಸಧ್ವನಿ — ಆ - ಸ ರಿ ಗ ಪ ನಿ ಸ̇

ಅವ - ಸ̇ ನಿ ಪ ಗ ರಿ ಸ

ಜನ್ಯರಾಗ, 29ನೇ ಮೇಳಕರ್ತ ಧೀರಶಂಕರಾಭರಣದಲ್ಲಿ ಜನ್ಯ. ಔಡವರಾಗ. ಉಪಾಂಗ ಈ ರಾಗದಲ್ಲಿ ಬರುವ ಸ್ವರಗಳು

**ಷಡ್ಜ ; ಚ. ರಿ ; ಅಂ. ಗಾ ; ಪ ; ಕಾ. ನಿ.**

3) ರಾಗ - ಕಲ್ಯಾಣಿ — ಆ - ಸ ರಿ ಗ ಮ ಪ ದ ನಿ ಸ̇

ಅವ - ಸ̇ ನಿ ದ ಪ ಮ ಗ ರಿ ಸ

ಜನಕರಾಗ, 65ನೇ ಮೇಳಕರ್ತ. ಈ ರಾಗದಲ್ಲಿ ಬರುವ ಸ್ವರಗಳು

**ಷಡ್ಜ ; ಚ. ರಿ ; ಅಂ. ಗಾ ; ಪ್ರ. ಮ ; ಪ ; ಚ. ಧೈ ; ಕಾ, ನಿ.**

4) ರಾಗ - ಮೋಹನ — ಆ - ಸ ರಿ ಗ ಪ ದ ಸ̇

ಅವ - ಸ̇ ದ ಪ ಗ ರಿ ಸ

ಜನ್ಯರಾಗ, 28ನೇ ಮೇಳಕರ್ತ ಹರಿಕಾಂಭೋಜಿಯಲ್ಲಿ ಜನ್ಯ, ಈ ರಾಗಕ್ಕೆ ಬರುವ ಸ್ವರಗಳು

**ಷಡ್ಜ ; ಚ. ರಿ ; ಅಂ. ಗಾ ; ಪ ; ಚ. ಧೈ.** - ಔಡವರಾಗ ಉಪಾಂಗ

5) ರಾಗ - ಅಭೋಗಿ ಆ - ಸ ರಿ ಗ ಮ ದ ಸ

ಅವ - ಸ ದ ಮ ಗ ರಿ ಸ

ಉಪಾಂಗ ಜನ್ಯರಾಗ, 22ನೇ ಮೇಳಕರ್ತ ಖರಹರಪ್ರಿಯದಲ್ಲಿ ಜನ್ಯ, ಔಡವರಾಗ ಈ ರಾಗಕ್ಕೆ ಬರುವ ಸ್ವರಗಳು

**ಷಡ್ಜ ; ಚ. ರಿ ; ಸಾ. ಗಾ ; ಶು ಮ ; ಚ. ಧೈ.**

6) ರಾಗ - ವಸಂತ ಆ - ಸ ಮ ಗ ಮ ದ ನಿ ಸ

ಅವ - ಸ ನಿ ದ ಮ ಗ ರಿ ಸ

ಉಪಾಂಗ ಜನ್ಯರಾಗ, 17ನೇ ಮೇಳಕರ್ತ ಸೂರ್ಯಕಾಂತದಲ್ಲಿ ಜನ್ಯ, ಈ ರಾಗಕ್ಕೆ ಬರುವ ಸ್ವರಗಳು

**ಅಂ. ಗಾ. ; ಶು. ಮ ; ಚ. ಧೈ ; ಕಾ. ನಿ. ವಕ್ರಔಡವ - ಷಾಡವರಾಗ**

**ಗಮನಿಸಿ** : ಅವರೋಹಣದಲ್ಲಿ ಶು. ರಿ, ಸೇರಿಕೊಳ್ಳುತ್ತದೆ.

7) ರಾಗ - ಕಾಂಭೋಜಿ ಆ - ಸ ರಿ ಗ ಮ ಪ ದ ಸ

ಅವ - ಸ ನಿ ದ ಪ ಮ ಗ ರಿ ಸ ಷಾಡವ - ಸಂಪೂರ್ಣರಾಗ

ಜನ್ಯರಾಗ, 28ನೇ ಮೇಳಕರ್ತ ಹರಿಕಾಂಭೋಜಿಯಲ್ಲಿ ಜನ್ಯ, ಭಾಷಾಂಗರಾಗ ಈ ರಾಗಕ್ಕೆ ಬರುವ ಸ್ವರಗಳು

**ಷಡ್ಜ ; ಚ. ರಿ ; ಅಂ. ಗಾ ; ಶು. ಮ ; ಪ ; ಚ. ಧೈ.**

**ಗಮನಿಸಿ** : ಅವರೋಹಣದಲ್ಲಿ ಕೈ. ನಿ, ಸೇರಿಕೊಳ್ಳುತ್ತದೆ. ಕಾಕಲಿನಿಷಾದವು ಅನ್ಯಸ್ವರ.

8) ರಾಗ - ಶ್ರೀರಾಗ ಆ - ಸ ರಿ ಮ ಪ ನಿ ಸ

ಅವ - ಸ ನಿ ಪ ದ ನಿ ಪ ಮ ರಿ ಗ ರಿ ಸ

ಉಪಾಂಗ ಜನ್ಯರಾಗ, 22ನೇ ಮೇಳಕರ್ತ ಖರಹರಪ್ರಿಯದಲ್ಲಿ ಜನ್ಯ, ಈ ರಾಗಕ್ಕೆ ಬರುವ ಸ್ವರಗಳು

**ಷಡ್ಜ ; ಚ. ರಿ ; ಶು. ಮ ; ಪ ; ಕೈ. ನಿ.** ಔಡವ - ವಕ್ರಸಂಪೂರ್ಣರಾಗ

**ಗಮನಿಸಿ** : ಅವರೋಹಣದಲ್ಲಿ ಚ. ಧೈ ಮತ್ತು ಸಾ. ಗಾ ಸ್ವರಗಳು ಸೇರಿಕೊಳ್ಳುತ್ತವೆ.

9) ರಾಗ - ಹಿಂದೋಳ ಆ - ಸ ಗ ಮ ದ ನಿ ಸ

ಅವ - ಸ ನಿ ದ ಮ ಗ ಸ

ಉಪಾಂಗ ಜನ್ಯರಾಗ, 20ನೇ ಮೇಳಕರ್ತ ನಠಭೈರವಿಯಲ್ಲಿ ಜನ್ಯ,ಔಡವರಾಗ. ಈ ರಾಗಕ್ಕೆ ಬರುವ ಸ್ವರಗಳು

**ಷಡ್ಜ ; ಸಾ. ಗಾ ; ಶು. ಮ ; ಶು. ಧೈ ; ಕೈ. ನಿ.**

10) ರಾಗ - ಬಿಲಹರಿ ಆ - ಸ ರಿ ಗ ಪ ದ ಸ

ಅವ - ಸ ನಿ ದ ಪ ಮ ಗ ರಿ ಸ ಔಢವ - ಸಂಪೂರ್ಣರಾಗ

ಉಪಾಂಗ ಜನ್ಯರಾಗ, 29ನೇ ಮೇಳಕರ್ತ ಧೀರ ಶಂಕರಾಭರಣದಲ್ಲಿ ಜನ್ಯ, ಭಾಷಾಂಗರಾಗ, ಈ ರಾಗಕ್ಕೆ ಬರುವ ಸ್ವರಗಳು

**ಆರೋಹಣದಲ್ಲಿ : ಷಡ್ಜ ; ಚ.ರಿ ; ಅಂ. ಗಾ ; ಪ ; ಚ. ಧೈ.** ಬರುತ್ತವೆ.

**ಅವರೋಹಣದಲ್ಲಿ : ಕಾ, ನಿ ಮತ್ತು ಶು. ಮ.** ಗಳು ಸೇರಿಕೊಳ್ಳುತ್ತವೆ. ಕೈಶಿಕಿ ನಿಷಾದವು ಅನ್ಯಸ್ವರ.

11) ರಾಗ - ಮಾಯಾಮಾಳವಗೌಳ ಆ - ಸ ರಿ ಗ ಮ ಪ ದ ನಿ ಸ

ಅವ - ಸ ನಿ ದ ಪ ಮ ಗ ರಿ ಸ

15ನೇ ಮೇಳಕರ್ತರಾಗ. ಈ ರಾಗಕ್ಕೆ ಬರುವ ಸ್ವರಗಳು

**ಷಡ್ಜ ; ಶು. ರಿ ; ಅಂ. ಗಾ ; ಶು; ಮ ; ಪ ; ಶು. ಧೈ ; ಕಾ. ನಿ.**

12) ರಾಗ - ಕಾಮವರ್ಧಿನಿ ಆ - ಸ ರಿ ಗ ಮ ಪ ದ ನಿ ಸ

ಅವ - ಸ ನಿ ದ ಪ ಮ ಗ ರಿ ಸ

51ನೇ ಮೇಳಕರ್ತ ಈ ರಾಗಕ್ಕೆ ಬರುವ ಸ್ವರಗಳು

**ಷಡ್ಜ ; ಶು. ರಿ ; ಅಂ. ಗಾ ; ಪ್ರ. ಮ ; ಪ ; ಶು. ಧೈ ; ಕಾ. ನಿ.**

13) ರಾಗ - ಮಲಹರಿ ಆ - ಸ ರಿ ಮ ಪ ದ ಸ

ಅವ - ಸ ದ ಪ ಮ ಗ ರಿ ಸ ಉಪಾಂಗ; ಔಢವ ಷಾಡವರಾಗ

15ನೇ ಮೇಳಕರ್ತ ಮಾಯಾಮಾಳವಗೌಳದಲ್ಲಿ ಜನ್ಯ, ಈ ರಾಗಕ್ಕೆ ಬರುವ ಸ್ವರಗಳು

**ಆರೋಹಣದಲ್ಲಿ : ಷಡ್ಜ ; ಶು. ರಿ ; ಶು. ಮ ; ಪ ; ಶು. ಧೈ**

**ಗಮನಿಸಿ : ಅವರೋಹಣದಲ್ಲಿ** ಅಂ. ಗಾ ಸೇರಿಕೊಳ್ಳುತ್ತದೆ.

14) ರಾಗ - ಶುದ್ಧಸಾವೇರಿ ಆ - ಸ ರಿ ಮ ಪ ದ ಸ

ಅವ - ಸ ದ ಪ ಮ ರಿ ಸ ಉಪಾಂಗ : ಔಢವರಾಗ

28ನೇ ಮೇಳಕರ್ತ ಹರಿಕಾಂಭೋಜಿಯಲ್ಲಿ ಜನ್ಯ, ಈ ರಾಗಕ್ಕೆ ಬರುವ ಸ್ವರಗಳು

**ಷಡ್ಜ ; ಚ. ರಿ ; ಶು. ಮ ; ಪ ; ಚ, ಧೈ.**

15) ರಾಗ - ಖರಹರಪ್ರಿಯ ಆ - ಸ ರಿ ಗ ಮ ಪ ದ ನಿ ಸ

ಅವ - ಸ ನಿ ದ ಪ ಮ ಗ ರಿ ಸ

22ನೇ ಮೇಳಕರ್ತ. ಈ ರಾಗಕ್ಕೆ ಬರುವ ಸ್ವರಗಳು

ಷಡ್ಜ ; ಚ. ರಿ ; ಸಾ. ಗಾ ; ಶು. ಮ ; ಪ ; ಚ. ಧೈ ; ಕೈ. ನಿ.

16) ರಾಗ - ಷಣ್ಮುಖಪ್ರಿಯ ಆ - ಸ ರಿ ಗ ಮ ಪ ದ ನಿ ಸ

ಅವ - ಸ ನಿ ದ ಪ ಮ ಗ ರಿ ಸ

56ನೇ ಮೇಳಕರ್ತ ಈ ರಾಗಕ್ಕೆ ಬರುವ ಸ್ವರಗಳು

ಷಡ್ಜ ; ಚ. ರಿ ; ಸಾ. ಗಾ ; ಪ್ರ. ಮ ; ಪ ; ಶು. ಧೈ ; ಕೈ. ನಿ.

17) ರಾಗ - ಹರಿಕಾಂಭೋಜಿ ಆ - ಸ ರಿ ಗ ಮ ಪ ದ ನಿ ಸ

ಅವ - ಸ ನಿ ದ ಪ ಮ ಗ ರಿ ಸ

28ನೇ ಮೇಳಕರ್ತ, ಈ ರಾಗಕ್ಕೆ ಬರುವ ಸ್ವರಗಳು.

ಷಡ್ಜ ; ಚ. ರಿ ; ಅಂ. ಗಾ ; ಶು. ಮ ; ಪ ; ಚ. ಧೈ ; ಕೈ. ನಿ.

18) ರಾಗ - ಆರಭಿ ಆ - ಸ ರಿ ಮ ಪ ದ ಸ

ಅವ - ಸ ನಿ ದ ಪ ಮ ಗ ರಿ ಸ

29ನೇ ಮೇಳಕರ್ತ ಧೀರ ಶಂಕರಾಭರಣದಲ್ಲಿ ಜನ್ಯ. ಈ ರಾಗಕ್ಕೆ ಆರೋಹಣದಲ್ಲಿ ಬರುವ ಸ್ವರಗಳು

ಷಡ್ಜ ; ಚ. ರಿ ; ಶು. ಮ ; ಪ ; ಚ, ಧೈ.

ಅವರೋಹಣದಲ್ಲಿ ಕಾ. ನಿ. ಅಂ. ಗಾ. ಸ್ವರಗಳು ಸೇರಿಕೊಳ್ಳುತ್ತವೆ.

19) **ರಾಗ - ಹಂಸನಾದ** ಅ - ಸ ರಿ ಮ ಪ ನಿ ಸ ಔಡವ - ಸಂಪೂರ್ಣ

ಅವ - ಸ ನಿ ಪ ಮ ರಿ ಸ ಘನರಾಗ; ಉಪಾಂಗರಾಗ

ಜನ್ಯರಾಗ 59ನೇ ಮೇಳಕರ್ತ ಧರ್ಮವತಿಯಲ್ಲಿ ಜನ್ಯ. ಉಪಾಂಗರಾಗ. ಉಭಯ ಔಢವರಾಗ.
ಈ ರಾಗದಲ್ಲಿ ಬರುವ ಸ್ವರಗಳು

ಷಡ್ಜ ; ಚ. ರಿ ; ಪ್ರ. ಮ ; ಪ ; ಕಾ, ನಿ.

20) **ರಾಗ - ಸರಸ್ವತಿ** ಅ - ಸ ರಿ ಮ ಪ ದ ಸ

ಅವ - ಸ ನಿ ದ ಪ ಮ ರಿ ಸ

ಜನ್ಯರಾಗ 64ನೇ ಮೇಳಕರ್ತ ವಾಚಸ್ಪತಿಯಲ್ಲಿ ಜನ್ಯ. ಉಪಾಂಗರಾಗ. ಔಢವ - ಷಾಡವರಾಗ.

ಈ ರಾಗದಲ್ಲಿ ಬರುವ ಸ್ವರಗಳು

**ಷಡ್ಜ ; ಚ. ರಿ ; ಪ್ರ. ಮ ; ಪ ; ಚ. ಧೈ.**

**ಅವರೋಹದಲ್ಲಿ ಕೈ. ನಿಷಾದವು ಸೇರಿಕೊಳ್ಳುತ್ತದೆ.**

ಹೀಗೆ ಪ್ರತಿಯೊಂದು ರಾಗದ ಲಕ್ಷಣವನ್ನು ಬಾಯಿಪಾಠಮಾಡಿ ಮನನ ಮಾಡಿಕೊಳ್ಳುವುದರಿಂದ ಆಯಾ ರಾಗದ ಸಂಗೀತ ರಚನೆಯನ್ನು ಹಾಡುವಾಗ ಅಥವಾ ನುಡಿಸುವಾಗ ಆಗುವ ತಪ್ಪುಗಳನ್ನು ತಡೆಹಿಡಿಯಬಹುದು. ಹೀಗೆ ಅಧ್ಯಯನ ಮಾಡಿದಲ್ಲಿ ರಾಗಗಳ ಸ್ವರೂಪವು ಸ್ಪಷ್ಟವಾಗಿ, ಖಚಿತವಾಗಿ ತಿಳಿಯುತ್ತದೆ.

ဢ ❖ ❖❖ ❁❖ ❖❖ ଓ

ಅಧ್ಯಾಯ - 5

# ತಾಳ - ಸೂಳಾದಿ ಸಪ್ತತಾಳಗಳು

ಸಂಗೀತಕ್ಕೆ ರಾಗವು ಸೌಂದರ್ಯವನ್ನು ಕೊಡಬಲ್ಲದಾದರೆ ತಾಳವು ಅಚ್ಚುಕಟ್ಟುತನವನ್ನು ಕಲಿಸುತ್ತದೆ. ಯಾವ ವಸ್ತುವಿಗಾದರೂ ಒಂದು ನಿರ್ದಿಷ್ಟ ಆಕಾರವಿಲ್ಲದಿದ್ದರೆ ಅದು ಚೆನ್ನಾಗಿ ಕಾಣಿಸಲಾರದು. ಅಂತೆಯೇ ಕವಿತೆ ಎಷ್ಟು ಸುಂದರವಾಗಿದ್ದರೂ ತಾಳರಹಿತ ಕವಿತೆಯು ತಾಳದ ಚೌಕಟ್ಟಿನೊಳಗಿನ ಕವಿತೆಗೆ ಸಾಟಿಯಾಗಲಾರದು. ಸಂಗೀತದ ಸಮಯವನ್ನು ಕೆಲವು ನಿರ್ದಿಷ್ಟವಾದ ನಿಯಮಗಳಿಗನುಸರಿಸಿ ಒಂದು ಕ್ರಮಬದ್ಧ ರೀತಿಯಲ್ಲಿ ಅಳವಡಿಸಿಕೊಳ್ಳುವ ವಿಧಾನವೇ "**ತಾಳ** " ತಾಳದ ಮುಖ್ಯ ಜೀವಾಳ ಲಯ. ಅಡಿಗೋಲಿನಲ್ಲಿರುವ ಹನ್ನೆರಡು ಭಾಗಗಳಲ್ಲಿ ಹೇಗೆ ಸ್ವಲ್ಪವಾದರೂ ವ್ಯತ್ಯಾಸವಿಲ್ಲವೋ ಹಾಗೆಯೇ ತಾಳದ ಭಾಗಗಳಲ್ಲಿ ವ್ಯತ್ಯಾಸವಿರಬಾರದು. ಹೀಗೆ ವ್ಯತ್ಯಾಸವಿರದ ಏಕರೂಪದ ಸಮಯಾವಕಾಶಕ್ಕೆ "ಲಯ"ವೆಂದು ಹೆಸರು.

ಹಾಡಿನಲ್ಲಿ ಸಾಹಿತ್ಯ ಭಾವಪೋಷಕವಾಗಿರುತ್ತದೆ ಅದಕ್ಕೆ ಅನುಸಾರವಾಗಿ ರಾಗವು ಹೆಣೆಯಲ್ಪಟ್ಟಿರುತ್ತದೆ. ಅವುಗಳಿಗೆ ಸರಿಯಾಗಬಹುದಾದ "ವೇಗ" ವಿರಬೇಕಾದುದು ಅವಶ್ಯ. ನಾವು ಸಂತೋಷದಿಂದಿರುವಾಗ ನಮ್ಮ ಮಾತಿನ ವೇಗ ಸಾಮಾನ್ಯವಾಗಿರುತ್ತದೆ. ಅವಸರದ ಸಮಯದಲ್ಲಿ ಇಲ್ಲವೇ ಸಿಟ್ಟಿನ ಸಮಯದಲ್ಲಿ ಮಾತಿನ ವೇಗ ಹೆಚ್ಚುತ್ತದೆ. ದುಃಖ ಬಂದಾಗ ತೀರ ನಿಧಾನವಾಗಿರುತ್ತದೆ. ಇದೇ ತತ್ವವನ್ನು ಸಂಗೀತದಲ್ಲೂ ನಾವು ಕಾಣಬಹುದು. ಭಕ್ತಿಯಿಂದ, ದುಃಖದಿಂದ ಹಾಡುವಂತಹ ಹಾಡುಗಳು ನಿಧಾನವಾಗಿರುತ್ತವೆ. ಇಂತಹ ವೇಗಕ್ಕೆ "ವಿಳಂಬಗತಿ" ಎಂದು ಹೆಸರು. ಸಂತೋಷದಿಂದ ಹಾಡುವಾಗ ವೇಗಕ್ಕೆ ತುಂಬಾ ಹೆಚ್ಚಾಗಿರುತ್ತದೆ. ಇಂತಹ ವೇಗವನ್ನು "ದ್ರುತಗತಿ" ಎನ್ನುವರು. ಹಾಡುವ ವೇಗವು ಸಾಹಿತ್ಯ ಭಾವ,ರಾಗಗಳಿಗೆ ಅನುಗುಣವಾಗಿ ಇರಬೇಕಾದುದು ತೀರಾ ಅವಶ್ಯ. ವೇಗದಲ್ಲಿ ವ್ಯತ್ಯಾಸವಾದರೆ ಹಾಡಿನ ಸೌಂದರ್ಯಕ್ಕೆ ಚ್ಯುತಿಯುಂಟಾಗುವುದು.

ತಾಳದಲ್ಲಿನ ಅತಿ ಕಡಿಮೆಯ ಮಾನ (ಅಳತೆ) ಅಕ್ಷರ. ಸಾಮಾನ್ಯವಾಗಿ ಚತುರಶ್ರಲಘುವಿನ ¼ ಭಾಗಕ್ಕೆ "ಅಕ್ಷರಕಾಲ" ವೆಂದು ಹೆಸರು. ಈ ಅಕ್ಷರಕಾಲಗಳ ಬೇರೆ ಬೇರೆ ವಿಧದ ಸರಿಜೋಡಣೆಯಿಂದ ವಿವಿಧ ತಾಳಪ್ರಕಾರಗಳಾಗುತ್ತವೆ. ಒಂದು ತಾಳದಲ್ಲಿ ಅತೀ ಕಡಿಮೆಯೆಂದರೆ ಮೂರು ಅಕ್ಷರಕಾಲಗಳಿರಬೇಕು. ತಾಳಗಳ ಅಕ್ಷರಕಾಲಗಳು ಮೂರರಿಂದ ತೊಡಗಿ ಹೆಚ್ಚುತ್ತಾ ಹೋಗುವುವು.

**ತಾಳಾಂಗಗಳು** : ಅಂಗವು ತಾಳ ದಶಪ್ರಾಣಗಳಲ್ಲಿ ಒಂದು. ತಾಳವನ್ನು ಎಣಿಸುವಾಗ ಬರುವ ಅವಯವಗಳನ್ನು

ತಾಳಾಂಗವೆನ್ನುತ್ತಾರೆ. ಸೂಳಾದಿ ಸಪ್ತ ತಾಳಗಳಲ್ಲಿ ಬಳಸುವ ತಾಳಾಂಗಗಳು ಮೂರು. ಅವು ಲಘು, ದ್ರುತ, ಅನುದ್ರುತ.

**ಲಘು** : ಒಂದು ಘಾತವನ್ನು ಹಾಕಿ ಬೆರಳುಗಳನ್ನು ಎಣಿಸುವುದಕ್ಕೆ ಲಘುವೆಂದು ಹೆಸರು. ಇದರ ಚಿಹ್ನೆ '1'

**ದ್ರುತ** : ಒಂದು ಘಾತವನ್ನು ಹಾಕಿ ವಿಸರ್ಜಿತವನ್ನು ಹಾಕುವುದಕ್ಕೆ ದ್ರುತವೆಂದು ಹೆಸರು. ಇದರ ಚಿಹ್ನೆ '0'

**ಅನುದ್ರುತ** : ಒಂದು ಘಾತವನ್ನು ಮಾತ್ರ ಹಾಕುವುದಕ್ಕೆ ಅನುದ್ರುತವೆಂದು ಹೆಸರು. ಇದರ ಚಿಹ್ನೆ 'ט'

ಒಂದು ಘಾತಕ್ಕೆ 4 ಅಕ್ಷರಗಳು ಬರುವುದನ್ನು ಚತುರಶ್ರಗತಿಯೆನ್ನುತ್ತಾರೆ. ನಾಲ್ಕು ಅಕ್ಷರಗಳ ಬದಲಿಗೆ 3, 5, 7, 9 ಅಕ್ಷರಗಳನ್ನು ಇರಿಸಿಕೊಳ್ಳುವುದಿದೆ. ಈ ರೀತಿ ಮಾಡಿದಾಗ ಅವು ಕ್ರಮವಾಗಿ ತಿಶ್ರ, ಖಂಡ, ಮಿಶ್ರ, ಸಂಕೀರ್ಣ ಗತಿಗಳೆನಿಸಿಕೊಳ್ಳುವುವು.

ತಾಳವು ವಿವಿಧ ಅವಯವಗಳಿಂದ ಕೂಡಿರುತ್ತದೆ. ಇಂತಹ ಭಾಗಗಳನ್ನು''ಅಂಗಗಳು'' ಎಂದು ಕರೆಯುತ್ತಾರೆ. ಅಂತಹ ಅಂಗಗಳು ಆರು ಇವೆ. ಅನುದ್ರುತ, ದ್ರುತ, ಲಘು, ಗುರು, ಪ್ಲುತ. ಕಾಕಪಾದ ಎಂದು ಇವುಗಳಿಗೆ ಹೆಸರು. ಇವುಗಳನ್ನು ಷಡಂಗಗಳೆಂದು ಕರೆಯುತ್ತಾರೆ. ಸಂಗೀತದಲ್ಲಿ ಉಪಯೋಗಿಸುವ ತಾಳಗಳು ಏಳು. ಇವುಗಳನ್ನು ''ಸಪ್ತತಾಳಗಳು'' ಎನ್ನುತ್ತಾರೆ. ಈ ಸಪ್ತತಾಳ ಪದ್ಧತಿಯು ಪುರಂದರದಾಸರ ಕಾಲದಿಂದ ಪ್ರಚಾರಕ್ಕೆ ಬಂದಿತು. ಈ ತಾಳಗಳಿಗೆ ಸೂಳಾದಿ ತಾಳಗಳು ಎಂದು ಹೆಸರು. ಈ ಏಳು ತಾಳಗಳಲ್ಲಿ ಷಡಂಗಗಳಲ್ಲಿನ ಮೊದಲಿನ ಮೂರು ಅಂಗಗಳಾದ ಅನುದ್ರುತ., ದ್ರುತ, ಲಘುಗಳು ಮಾತ್ರ ಇವೆ. ಈ ಸಪ್ತ ತಾಳಗಳಿಗೆ ಕ್ರಮವಾಗಿ ಧ್ರುವ, ಮಠ್ಯ, ರೂಪಕ, ಝಂಪೆ, ತ್ರಿಪುಟ, ಅಟ, ಏಕ ತಾಳಗಳೆಂದು ಹೆಸರು.

ಅನುದ್ರುತದ ಕಾಲಪ್ರಮಾಣ ಒಂದು ಅಕ್ಷರಕಾಲ. ದ್ರುತದ ಕಾಲಪ್ರಮಾಣ ಎರಡು ಅಕ್ಷರಕಾಲ. ಲಘುವಿನಲ್ಲಿ 5 ಜಾತಿಗಳಿವೆ. ಅವುಗಳಿಗೆ ಕ್ರಮವಾಗಿ 3, 4, 5, 7, 9 ಅಕ್ಷರಕಾಲಗಳಿದ್ದು ತಿಶ್ರ, ಚತುರಶ್ರ, ಖಂಡ, ಮಿಶ್ರ, ಸಂಗೀರ್ಣಗಳೆಂಬ ಹೆಸರಿದೆ. ತಾಳವನ್ನು ಹಾಕಿತೋರಿಸುವ ಕ್ರಮಕ್ಕೆ ''ಕ್ರಿಯೆ'' ಎಂದು ಹೆಸರು. ಈ ಕ್ರಿಯೆಯಲ್ಲಿ ಸಶಬ್ಧಕ್ರಿಯೆ (ಘಾತ), ವಿಸರ್ಜಿತ ( ಕೈಯನ್ನು ಮಗುಚಿ ಹಾಕುವುದು) ಮತ್ತು ಬೆರಣಿಕೆಗಳು ನಿಶ್ಶಬ್ಧಕ್ರಿಯೆಗಳು ಬರುತ್ತವೆ. ಅನುದ್ರುತವನ್ನು ಒಂದು ಘಾತದಿಂದಲೂ, ದ್ರುತವನ್ನು ಒಂದು ಘಾತ ಮತ್ತು ವಿಸರ್ಜಿತದಿಂದಲೂ,

ಲಘುವನ್ನು ಘಾತದಿಂದ ಕೂಡಿದ ಬೆರಳೆಣಿಕೆಯಿಂದಲೂ ತೋರಿಸುತ್ತಾರೆ. ಲಘುವಿನ ಸೂಚನೆಯಲ್ಲಿ ಬರುವ ಬೆರಳೆಣಿಕೆ ಲಘುವಿಗಿರುವ ಅಕ್ಷರಕಾಲಕ್ಕಿಂತ ಒಂದು ಕಡಿಮೆ ಇರುತ್ತದೆ.

ತ್ರಿಶ್ರಜಾತಿಗೆ **ಮೂರು** ಅಕ್ಷರಗಳು - ತ್ರಿಶ್ರ ಲಘು

ಚತುರಶ್ರಜಾತಿಗೆ **ನಾಲ್ಕು** ಅಕ್ಷರಗಳು - ಚತುರಶ್ರ ಲಘು

ಖಂಡಜಾತಿಗೆ **ಐದು** ಅಕ್ಷರಗಳು - ಖಂಡ ಲಘು

ಮಿಶ್ರಜಾತಿಗೆ **ಏಳು** ಅಕ್ಷರಗಳು - ಮಿಶ್ರ ಲಘು

ಸಂಕೀರ್ಣ ಜಾತಿಗೆ **ಒಂಭತ್ತು** ಅಕ್ಷರಗಳು - ಸಂಕೀರ್ಣ ಲಘು

ಸಪ್ತತಾಳಗಳಲ್ಲಿ ಪ್ರತಿಯೊಂದರಲ್ಲೂ ಲಘು ಇದ್ದೇ ಇರುತ್ತದೆ. ಅನುದ್ರುತವು ಝಂಪೆ ತಾಳದಲ್ಲಿ ಮಾತ್ರ ಇದೆ. ಏಕತಾಳದಲ್ಲಿ ಲಘುವು ಮಾತ್ರ ಇದೆ. ಲಘುವಿನಲ್ಲಿ ಐದು ಜಾತಿಭೇದಗಳಿರುವುದರಿಂದಲೂ, ಸಪ್ತತಾಳದ ಪ್ರತಿಯೊಂದರಲ್ಲೂ ಲಘುವು ಇರುವುದರಿಂದಲೂ ಪ್ರತಿಯೊಂದು ತಾಳವೂ ಲಘುವಿನ ಐದು ಜಾತಿಭೇದಗಳಿಗೆ ಅನುಗುಣವಾಗಿ ಐದೈದು ಪ್ರತ್ಯೇಕವಾದ ತಾಳಗಳಾಗುತ್ತವೆ. ಸಪ್ತತಾಳಗಳ ಹೆಸರನ್ನು ಹೇಳುವಾಗ ಲಘುವಿನ ಜಾತಿಯ ಕುರಿತು ಹೇಳದಿದ್ದಲ್ಲಿ ಧ್ರುವ, ಮಠ್ಯ, ರೂಪಕ, ಏಕತಾಳಗಳನ್ನು ಚತುರಶ್ರಜಾತಿಯವೆಂತಲೂ, ಝಂಪೆತಾಳವನ್ನು ಮಿಶ್ರಜಾತಿಯೆಂತಲೂ ತ್ರಿಪುಟತಾಳವನ್ನು ತ್ರಿಶ್ರಜಾತಿಯೆಂತಲೂ, ಅಟತಾಳವನ್ನು ಖಂಡಜಾತಿಯೆಂದೂ ತಿಳಿಯಬೇಕು.

**ಆವರ್ತ** : ಒಂದು ತಾಳದ ತಾಳಾಂಗಗಳನ್ನು ಒಂದಾವರ್ತಿ ಪೂರ್ಣವಾಗಿ ನಡೆಸುವುದಕ್ಕೆ ಅವರ್ತವೆಂದು ಹೆಸರು. ಉದಾ: ||ಸರಿಗಮ| ಪದ| ನಿಸ|| ಸಂಗೀತ ರಚನೆಗಳನ್ನು ಬರೆಯುವಾಗ ತಾಳಾವರ್ತದ ಪ್ರಾರಂಭ ಮತ್ತು ಮುಕ್ತಾಯಕ್ಕೆ ಎರಡು ಉದ್ದನೆ ಗೆರೆಗಳನ್ನು, ಪ್ರತಿಯೊಂದು ಅಂಗದ ಮುಕ್ತಾಯಕ್ಕೆ ಒಂದು ಉದ್ದನೆ ಗೆರೆಯನ್ನು ಎಳೆದು ಸೂಚಿಸಲಾಗುವುದು.

ಸಪ್ತತಾಳಗಳ ಹೆಸರು, ಅಂಗ, ಚಿಹ್ನೆ, ಅಕ್ಷರಕಾಲ, ಕ್ರಿಯೆ ಮತ್ತು ಲಘುವಿನ ಹೆಸರು. ಜಾತಿ, ಅಕ್ಷರಕಾಲ, ಚಿಹ್ನೆಗಳನ್ನು ಮುಂದಿನ ಪಟ್ಟಿಯಲ್ಲಿ ಕೊಡಲಾಗಿದೆ.

## ಲಘುವಿನ 5 ಜಾತಿಗಳು

| ಲಘುವಿನ ಜಾತಿಯ ಹೆಸರು | ಚಿಹ್ನೆ | ಅಕ್ಷರಕಾಲ | ತಾಳಹಾಕುವ ಕ್ರಮ |
|---|---|---|---|
| ತಿಶ್ರಲಘು | I | 3 | ಒಂದು ಘಾತ, ಎರಡು ಬೆರಳೆಣಿಕೆ, (ಕಿರುಬೆರಳು ಮತ್ತು ಉಂಗುರಬೆರಳು) |
| ಚತುರಶ್ರಲಘು | I | 4 | ಒಂದು ಘಾತ, ಮೂರು ಬೆರಳೆಣಿಕೆ, (ಕಿರುಬೆರಳು, ಉಂಗುರಬೆರಳು, ನಡುಬೆರಳು) |
| ಖಂಡಲಘು | I | 5 | ಒಂದು ಘಾತ, ನಾಲ್ಕು ಬೆರಳೆಣಿಕೆ,(ಕಿರುಬೆರಳು, ಉಂಗುರಬೆರಳು, ನಡುಬೆರಳು, ತೋರುಬೆರಳು) |
| ಮಿಶ್ರಲಘು | I | 7 | ಒಂದು ಘಾತ, ಆರು ಬೆರಳೆಣಿಕೆ,(ಕಿರುಬೆರಳು, ಉಂಗುರಬೆರಳು,ನಡುಬೆರಳು, ತೋರು ಬೆರಳು, ಹೆಬ್ಬೆರಳು, ಪುನಃ ಕಿರುಬೆರಳು) |
| ಸಂಕೀರ್ಣಲಘು | I | 9 | ಒಂದು ಘಾತ, ಎಂಟು ಬೆರಳೆಣಿಕೆ,(ಕಿರುಬೆರಳು ಉಂಗುರಬೆರಳು, ನಡುಬೆರಳು, ತೋರುಬೆರಳು, ಹೆಬ್ಬೆರಳು, ಪುನಃ ಕಿರುಬೆರಳು, ಉಂಗುರಬೆರಳು, ನಡುಬೆರಳು). |

ಸಪ್ತತಾಳಗಳ ಹೆಸರು ಅಂಗಗಳ ಗುರುತು ಮತ್ತು ಹೆಸರು, ಅಕ್ಷರಕಾಲ, ಕ್ರಿಯೆಗಳು ಈ ಕೆಳಗಿನಂತಿವೆ.

| | ತಾಳಗಳ ಹೆಸರು | ಅಂಗಗಳ ಗುರುತು | ಅಂಗಗಳ ಹೆಸರು | ಅಕ್ಷರ ಕಾಲಗಳು | ತಾಳ ಹಾಕುವ ಕ್ರಮ (ಕ್ರಿಯೆ) |
|---|---|---|---|---|---|
| 1. | ಧ್ರುವತಾಳ | I 0 I I | ಚತುರಶ್ರಲಘು ದ್ರುತ ಮತ್ತು ಎರಡು ಚತುರಶ್ರ ಲಘು | 4+2+4+ 4 =14 | ಘಾತ, ಮೂರು ಬೆರಳೆಣಿಕೆ +ಘಾತ, ವಿಸರ್ಜಿತ+ಘಾತ, ಮೂರು ಬೆರಳೆಣಿಕೆ(2ಬಾರಿ). |
| 2. | ಮಠ್ಯತಾಳ | I 0 I | ಚತುರಶ್ರಲಘು ಧ್ರುತ ಮತ್ತು ಚತುರಶ್ರಲಘು | 4+2+4 = 10 | ಘಾತ, ಮೂರು ಬೆರಳೆಣಿಕೆ +ಘಾತ, ವಿಸರ್ಜಿತ+ ಘಾತ, ಮೂರು ಬೆರಳೆಣಿಕೆ |
| 3. | ರೂಪಕತಾಳ | 0 I | ದ್ರುತ ಮತ್ತು ಚತುರಶ್ರಲಘು | 2+4 = 6 | ಘಾತ, ವಿಸರ್ಜಿತ+ಘಾತ, ಮೂರು ಬೆರಳೆಣಿಕೆ. |
| 4. | ಝುಂಪತಾಳ | I U 0 | ಮಿಶ್ರ ಲಘು. ಅನುದ್ರುತ. ಮತ್ತು ದ್ರುತ. | 7+1+2 = 10 | ಘಾತ, ಆರು ಬೆರಳಣಿಕೆ+ ಘಾತ + ಘಾತ ವಿಸರ್ಜಿತ. |
| 5. | ತ್ರಿಪುಟತಾಳ | I 0 0 | ತಿಶ್ರಲಘು, ಎರಡು ದ್ರುತಗಳು | 3+2+2 = 7 | ಘಾತ, ಎರಡು ಬೆರಣಿಕೆ+ ಘಾತ, ವಿಸರ್ಜಿತ + ಘಾತ ವಿಸರ್ಜಿತ. |
| 6. | ಅಟತಾಳ | I I 00 | ಎರಡು ಖಂಡ ಲಘುಗಳು ಎರಡು ದ್ರುತಗಳು | 5+5+2+2 = 14 | ಘಾತ, ನಾಲ್ಕು ಬೆರಳೆಣಿಕೆ + ಘಾತ, ನಾಲ್ಕು ಬೆರಳೆಣಿಕೆ +ಘಾತ, ವಿಸರ್ಜಿತ+ಘಾತ, ವಿಸರ್ಜಿತ. |
| 7. | ಏಕತಾಳ | I | ಒಂದು ಚತು ರಶ್ರಲಘು. | 4 | ಘಾತ, ಮೂರು ಬೆರಳೆಣಿಕೆ |

ಲಘುವಿನ 5 ಜಾತಿಭೇದದ ಪರಿಣಾಮವಾಗಿ ಸಪ್ತತಾಳಗಳು 35 ತಾಳಗಳಗುತ್ತವೆ. ಈ ಸಂಬಂಧದ ಕೋಷ್ಟಕವನ್ನು ಮುಂದಿನ ಪುಟದಲ್ಲಿ ಕೊಡಲಾಗಿದೆ.

ಲಘುವಿನ 5 ಜಾತಿಭೇದದ ಪರಿಣಾಮವಾಗಿ ಸಪ್ತತಾಳಗಳು 35 ತಾಳವಾಗುವುದನ್ನು ಕೆಳಗಿನ ಪಟ್ಟಿಯು ತೋರಿಸುತ್ತದೆ.

**ಲಘುವಿನ 5 ಜಾತಿಗಳಿಂದ ಅಲಂಕಾರದ ಸಪ್ತತಾಳಗಳು. 35 ತಾಳಗಳಾಗುವ ಪಟ್ಟಿ**

| | ಧ್ರುವತಾಳ 1ಲ+1ದೃ+2ಲ | ಮಠ್ಯತಾಳ 1ಲ+1ದೃ+1ಲ | ರೂಪಕ 1ದೃ+1ಲ | ಝಂಪೆ 1ಲ+1ಅ.ದೃ+1ದೃ | ತ್ರಿಪುಟ 1ಲ+2ದೃ | ಅಟ 2ಲ+2ದೃ | ಏಕ 1ಲ |
|---|---|---|---|---|---|---|---|
| ತ್ರಿಶ್ರಜಾತಿ | 3+2+6 =11 | 3+2+3 =8 | 2+3 =5 | 3+1+2 =6 | 3+4 =7 | 6+4 =10 | 3 |
| ಚತುರಶ್ರ | 4+2+8 =14 | 4+2+4 =10 | 2+4 =6 | 4+1+2 =7 | 4+4 =8 | 8+4 =12 | 4 |
| ಖಂಡ | 5+2+10 =17 | 5+2+5 =12 | 2+5 =7 | 5+1+2 =8 | 5+4 =9 | 10+4 =14 | 5 |
| ಮಿಶ್ರ | 7+2+14 =23 | 7+2+7 =16 | 2+7 =9 | 7+1+2 =10 | 7+4 =11 | 14+4 =18 | 7 |
| ಸಂಕೀರ್ಣ | 9+2+18 =29 | 9+2+9 =20 | 2+9 =11 | 9+1+2 =12 | 9+4 =13 | 18+4 =22 | 9 |

**ಗ್ರಹ** : ಸಂಗೀತ ರಚನೆಯೂ ತಾಳವೂ ಪ್ರಾರಂಭವಾಗಲು ಇರುವ ಸಂಬಂಧಕ್ಕೆ '**ಗ್ರಹ**' ಎಂದು ಹೆಸರು. ಇವುಗಳಲ್ಲಿ ಎರಡು ವಿಧ. ಸಮಗ್ರಹ ಮತ್ತು ವಿಷಮಗ್ರಹ.

ಸಮಗ್ರಹ : ತಾಳ ಮತ್ತು ರಚನೆಯು ಏಕಕಾಲದಲ್ಲಿ ಅಂದರೆ ಒಟ್ಟಿಗೆ ಪ್ರಾರಂಭವಾಗುತ್ತವೆ.

ಉದಾ: ಲಂಬೋದರ.

ವಿಷಮಗ್ರಹ : ತಾಳ ಮತ್ತು ರಚನೆಯು ಏಕಕಾಲದಲ್ಲಿ ಅಂದರೆ ಒಟ್ಟಿಗೆ ಪ್ರಾರಂಭವಾಗದಿರುವುದು. ಇದರಲ್ಲಿ ಎರಡು ವಿಧ. ಅವು ಅತೀತ ಗ್ರಹ, ಅನಾಗತ ಗ್ರಹ.

**ಅತೀತ ಗ್ರಹ** : ಸಂಗೀತವು ಅರಂಭವಾಗಿ ನಂತರ ತಾಳವು ಅರಂಭವಾಗುವುದು ಅತೀತ ಗ್ರಹ.

ಉದಾ : ಸ॥ ಮಾನಮೆವರುರಾ...... ಹಾಗೂ ಸುಪ್ರಸಿದ್ಧ ಬೈರವಿ ಅಟ್ಟತಾಳ ವರ್ಣದಲ್ಲಿನ ಮೊದಲೆರಡು ಎತ್ತುಗಡೆ ಸ್ವರಗಳು.

**ಅನಾಗತ ಗ್ರಹ** : ತಾಳವು ಮೊದಲು ಪ್ರಾರಂಭವಾಗಿ ನಂತರ ಸಂಗೀತ ರಚನೆಯು ಪ್ರಾಂಭವಾಗುವುದಕ್ಕೆ ಅನಾಗತ ಗ್ರಹವೆಂದು ಹೆಸರು. ಉದಾ: ವಸಂತರಾಗದ ಕೃತಿ - ಪರಮಪುರುಷ.




ತಾಳಕ್ಕೆ ಸಂಬಂಧಪಟ್ಟ ಕೆಲವು ವಿಷಯಗಳನ್ನು ಮಾತ್ರ ತಿಳಿಸಲಾಗಿದೆ. ಇನ್ನೂ ಹಲವಾರು ವಿಷಯಗಳನ್ನು ಮುಂದಿನ ಹಂತಗಳಲ್ಲಿ ಅರಿಯಬೇಕಾಗುತ್ತದೆ. ಲಕ್ಷ್ಯಭಾಗದಲ್ಲಿ ಪ್ರಯೋಗವಾಗಿರುವ ರಚನೆಗಳ ಮೂಲಕ ತಾಳದ ವಿಷಯವನ್ನು ಇನ್ನೂ ಸ್ಪಷ್ಟವಾಗಿ ತಿಳಿಯಬಹುದು.



# ಅಧ್ಯಾಯ - 6

# ಸಂಗೀತ ರಚನೆಗಳ ಲಕ್ಷಣ

ಸಂಗೀತ ರಚನೆಗಳಿಲ್ಲದೆ ಸಂಗೀತ ಪ್ರಕಾರವಿಲ್ಲ. ವೈವಿಧ್ಯಮಯವಾದ ಸಂಗೀತ ರಚನೆಗಳು ಶಾಸ್ತ್ರೀಯ ಬೆಳವಣಿಗೆಗೆ ಕಾರಣವಾಗಿವೆ. ಸಂಗೀತ ರಚನೆಗಳಿಂದಲೇ ರಾಗದ ಸ್ವರೂಪವು ವ್ಯಕ್ತವಾಗಿ ನಿರ್ದಿಷ್ಟ ರೂಪವನ್ನು ತಾಳುತ್ತದೆ ಎನ್ನಬಹುದು. ಸಂಗೀತ ರಚನೆಗಳ ಮೂಲಕವೇ ರಾಗಗಳು ಅಸ್ತಿತ್ವಕ್ಕೆ ಬರಲು ಸಾಧ್ಯ. ಮನೋಧರ್ಮ ಸಂಗೀತವೂ ಸಂಗೀತ ರಚನೆಗಳನ್ನು ಅವಲಂಬಿಸಿದೆ.

ಸಂಗೀತ ರಚನೆಗಳಲ್ಲಿ ಅಭ್ಯಾಸಗಾನ ರಚನೆಗಳು ಮತ್ತು ಸಭಾಗಾನ ರಚನೆಗಳು ಎಂಬ ಎರಡು ಮುಖ್ಯ ಭಾಗಗಳಿವೆ.

**ಅಭ್ಯಾಸಗಾನರಚನೆ** : ಸಂಗೀತ ಕಲಿಕೆಯ ವಿದ್ಯಾರ್ಥಿಗಳಿಗೆ ಸ್ವರದ ವಿವಿಧ ಜೋಡಣೆಯನ್ನು ಕಲಿಸುವ ಪಾಠಗಳನ್ನು ಅಭ್ಯಾಸಗಾನರಚನೆ ಎನ್ನುತ್ತಾರೆ. ಸ್ವರಾವಳಿ, ಗೀತೆ, ಜತಿಸ್ವರ, ಸ್ವರಜತಿಗಳು

**ಸಭಾಗಾನರಚನೆ** : ಸಭೆಗಳಲ್ಲಿ ಪ್ರದರ್ಶಿಸಲ್ಪಡುವ ರಚನೆಗಳಿಗೆ ಸಭಾಗಾನರಚನೆ ಎನ್ನುತ್ತಾರೆ. ವರ್ಣ, ಕೃತಿ, ಕೀರ್ತನೆ, ಪದ, ಜಾವಳಿ, ತಿಲ್ಲಾನ, ವಚನ ಮುಂತಾದವು.

## ಅಭ್ಯಾಸಗಾನ ರಚನೆಗಳು

**ಸ್ವರಾವಳಿ** : ಸರಳೆವರಸೆ, ತಾರಸ್ಥಾಯಿವರಸೆ, ಮಂದ್ರಸ್ಥಾಯಿವರಸೆ, ದಾಟುವರಸೆ, ಜಂಟಿವರಸೆ ಮತ್ತು ಅಲಂಕಾರಗಳನ್ನು ಸ್ವರಾವಳಿ ಎಂದು ಕರೆಯುತ್ತಾರೆ. ಸ್ವರಗಳ ಗುಂಪಿಗೆ ಸ್ವರಾವಳಿ ಎಂದು ಹೆಸರು.

**ಸರಳೆವರಸೆ** : ಸಪ್ತಸ್ವರಗಳ ಕ್ರಮವಾದ ಮತ್ತು ಸರಳವಾದ ಜೋಡಣೆಗೆ ಸರಳೆವರಸೆಯೆಂದು ಹೆಸರು. ಈ ವರಸೆಗಳಲ್ಲಿ ಮಧ್ಯಸ್ಥಾಯಿ ಸ್ವರಗಳು ಪ್ರಧಾನವಾಗಿದ್ದು, ತಾರಷಡ್ಜವನ್ನು ಮಾತ್ರ ಹೊಂದಿರುತ್ತದೆ.

**ತಾರಸ್ಥಾಯಿವರಸೆ** : ಆಧಾರಷಡ್ಜದಿಂದ ಪ್ರಾರಂಭಿಸಿ ಆರೋಹಕ್ರಮದಲ್ಲಿ ಮಧ್ಯಸ್ಥಾಯಿ ಮತ್ತು ತಾರಸ್ಥಾಯಿ ಸ್ವರಗಳನ್ನು ಹಂತ ಹಂತವಾಗಿ ಹೊಂದಿರುವ ಸರಳವಾದ ಸ್ವರವರಸೆಗಳನ್ನು ತಾರಸ್ಥಾಯಿ ವರಸೆಗಳೆಂದು ಕರೆಯಲಾಗಿದೆ.

**ಮಂದ್ರಸ್ಥಾಯಿವರಸೆ** : ತಾರಸ್ಥಾಯಿ ಷಡ್ಜದಿಂದ ಪ್ರಾರಂಭಿಸಿ, ಅವರೋಹಣ ಕ್ರಮದಲ್ಲಿ, ಬರುವ ಸ್ವರಗಳ ಕ್ರಮವಾದ ಜೋಡಣೆಗೆ ಮಂದ್ರಸ್ಥಾಯಿವರಸೆ ಎನ್ನಲಾಗಿದೆ. ಈ ವರಸೆಗಳಲ್ಲಿ ಮಂದ್ರಸ್ಥಾಯಿ ಸ್ವರಗಳು ಮತ್ತು ಮಧ್ಯಸ್ಥಾಯಿ ಸ್ವರಗಳೊಂದಿಗೆ ತಾರಷಡ್ಜವೂ ಬರುತ್ತದೆ.

**ದಾಟುವರಸೆ** : ಸ್ವರಗಳ ಜೋಡಣೆಯು ಕ್ರಮರಹಿತವಾಗಿದ್ದು, ಅಂದರೆ ಒಂದು, ಎರಡು ಅಥವಾ ಮೂರು ಸ್ವರಗಳನ್ನು ಬಿಟ್ಟು ಮುಂದಿನ ಸ್ವರವನ್ನು ಹೊಂದಿರುವುದಕ್ಕೆ ದಾಟುವರಸೆಯೆಂದು ಹೆಸರು. ದಾಟುವರಸೆಯಲ್ಲಿ ಸ್ವರಗಳು ವಕ್ರಗತಿಯಲ್ಲಿ ಸಂಚರಿಸುತ್ತವೆ.

**ಜಂಟಿವರಸೆ** : ಸ್ವರಗಳ ಜೋಡಣೆಯಲ್ಲಿ ಪ್ರತಿಯೊಂದು ಸ್ವರವೂ ಪುನರಾವರ್ತನೆಯಾಗಿ, ಜಂಟಿಯಾಗಿ ಬರುವುದರಿಂದ ಜಂಟಿವರಸೆಯೆಂದು ಹೆಸರು. ಈ ಜಂಟಿ ಸ್ವರಗಳಲ್ಲಿ ಎರಡನೆಯ ಸ್ವರಕ್ಕೆ ಹೊಡೆತವಿದ್ದು, ಸ್ಫುರಿತ ಗಮಕವು ಪ್ರಯೋಗವಾಗುತ್ತದೆ. ಈ ಸ್ವರಾವಳಿಗಳು ಮಾಯಾಮಾಳವಗೌಳ ರಾಗದಲ್ಲಿದ್ದು, ಆದಿತಾಳದಲ್ಲಿರುತ್ತವೆ.

**ಅಲಂಕಾರ** : ಸ್ವರಗಳ ವಿವಿಧ ರೀತಿಯ ಸಂಯೋಜನೆಗೆ ಅಲಂಕಾರವೆಂದು ಹೆಸರು. ವಿವಿಧ ರೀತಿಯ ತಾಳಗಳಲ್ಲಿ ಅಲಂಕೃತವಾದ ಸ್ವರಾವಳಿಗಳನ್ನು ಅಲಂಕಾರವೆಂದು ಕರೆಯಬಹುದು. ಈ ಅಲಂಕಾರಗಳು ಸೂಳಾದಿ ಸಪ್ತತಾಳಗಳಲ್ಲೂ ಮತ್ತು ಅದರ ಲಘುವಿನ ಐದು ಜಾತಿಗಳಲ್ಲೂ ನಿಯೋಜಿತವಾಗಿವೆ. ಮುಖ್ಯವಾದ ಅಲಂಕಾರಗಳು ಏಳಿದ್ದರೂ, ಮೂವತ್ತೈದು ಅಲಂಕಾರಗಳು ರಚಿತವಾಗಿವೆ. ಅಲಂಕಾರಗಳು ಮಾಯಾಮಾಳವಗೌಳ ರಾಗದಲ್ಲೇ ರಚಿತವಾಗಿವೆ.

**ಗೀತೆ** : ಇದು ಸರಳವಾದ ದೇವತಾಸ್ತುತಿ. ಈ ರಚನೆಯಲ್ಲಿ ರಾಗದ ಸಂಚಾರವನ್ನು ಸರಳವಾಗಿ ನಿರೂಪಿಸಲಾಗುತ್ತದೆ. ಗೀತೆಯು ಮೂರು ಸ್ಥಾಯಿಗಳಲ್ಲೂ ವ್ಯಾಪಕವಾಗಿದ್ದು, ಸುಲಭವಾದ ಸೂಳಾದಿತಾಳಗಳಲ್ಲಿ ರಚಿತವಾಗಿವೆ. ಸ್ವರಗಳಿಗೆ ಸಾಹಿತ್ಯಹೊಂದಿಸುವ ಮೊಟ್ಟ ಮೊದಲ ರಚನೆ ಗೀತೆಗಳು.

ಸ್ವರಾವಳಿ, ಅಲಂಕಾರ ಮತ್ತು ಗೀತೆಗಳು ತಾಳದಲ್ಲಿ ಅಕ್ಷರ ಕಾಲದ ಎಣಿಕೆಯನ್ನು ಹೊಂದಿರುತ್ತವೆ. ಗೀತೆಗಳಲ್ಲಿ ಎರಡು ವಿಧ. ಅವು ಸಂಚಾರಿಗೀತೆ ಮತ್ತು ಲಕ್ಷಣ ಗೀತೆಗಳು; ಘನರಾಗಗಳಲ್ಲಿ ಗೀತೆಗಳು ರಚಿತವಾಗಿದ್ದರೆ, ಅವುಗಳನ್ನು ಘನರಾಗ ಗೀತೆಗಳೆನ್ನುತ್ತಾರೆ.

**ಸಂಚಾರಿ ಗೀತೆ** : ರಾಗದ ಸಂಚಾರವನ್ನು ಸರಳವಾಗಿ ಹೊಂದಿರುವುದಕ್ಕೆ ಸಾಧಾರಣಗೀತೆ, ಸಾಮಾನ್ಯ ಗೀತೆ, ಲಕ್ಷ್ಯಗೀತೆಯೆಂದೂ ಕರೆಯುತ್ತಾರೆ. ಆದರೆ ಮಲಹರಿ ರಾಗದಲ್ಲಿರುವ ಗೀತೆಗಳನ್ನು ಪಿಳ್ಳಾರಿ ಗೀತೆಗಳೆಂದು ಕರೆಯುವುದು ವಾಡಿಕೆಯಲ್ಲಿದೆ. ಗೀತೆಯು ರಾಗದ ಪ್ರಯೋಗಶೀಲತೆಯನ್ನು ಒಳಗೊಂಡಿರುತ್ತದೆ.

| ಸೂ<br>ಚ<br>ನೆ | ಮಲಹರಿ ಗೀತೆಗಳು ಗಣಪತಿಸ್ತುತಿಯಿಂದ ಪ್ರಾರಂಭವಾಗುವುದರಿಂದ (ಪಿಳ್ಳೆಯಾರ್ ಎಂಬುದಕ್ಕೆ ತಮಿಳಿನಲ್ಲಿ, ಪಿಳ್ಳಾರಿ ಎಂಬುದಕ್ಕೆ ಕನ್ನಡದಲ್ಲಿ ಗಣಪತಿಯೆಂದು ಅರ್ಥ) ಪಿಳ್ಳಾರಿ ಗೀತೆಗಳೆಂದೇ ಕರೆಯುವುದು ವಾಡಿಕೆಯಾಗಿದೆ. |
|---|---|

**ಲಕ್ಷಣಗೀತೆ** : ರಾಗದ ಲಕ್ಷಣವನ್ನು ವಿವರಿಸುವ ಸಾಹಿತ್ಯವನ್ನುಳ್ಳ ಗೀತೆಗಳಿಗೆ ಲಕ್ಷಣಗೀತೆಯೆಂದು ಹೆಸರು. ಗೀತೆಯು ರಚಿತವಾಗಿರುವ ರಾಗ ಮತ್ತು ತಾಳಗಳ ಹೆಸರನ್ನು ಲಕ್ಷಣ ಗೀತೆಗಳು ಹೊಂದಿರುತ್ತವೆ. ಗೀತೆಯ ಪ್ರಾರಂಭ ಮತ್ತು ಕೊನೆಯಲ್ಲಿ ದೇವತಾಸ್ತುತಿಯ ಸಾಹಿತ್ಯವನ್ನು ಹೊಂದಿರುತ್ತವೆ.

| ಸೂಚನೆ : ಗೀತೆಗಳನ್ನು ಹಾಡುವಾಗ ತಾಳದ ಪ್ರತಿಯೊಂದು ಎಣಿಕೆಯನ್ನು ಸ್ಪಷ್ಟವಾಗಿ ತೋರಿಸಬೇಕು. |
|---|

**ಜತಿಸ್ವರ** : ಸ್ವರ ಪ್ರಧಾನವಾದ, ಜತಿಗಳ ಆಧಾರದ ಮೇಲೆ ರಚಿತವಾದ ರಚನೆಯನ್ನು ಜತಿಸ್ವರವೆನ್ನುತ್ತಾರೆ. ಜತಿಸ್ವರವು ನೃತ್ಯ ಸಂಗೀತಕ್ಕೂ ಸೇರುತ್ತದೆ. ಜತಿಸ್ವರದಲ್ಲಿ ಪಲ್ಲವಿ, ( ಕೆಲವು ಜತಿಸ್ವರಗಳಲ್ಲಿ ಅನುಪಲ್ಲವಿ) ಚರಣಗಳೆಂಬ ಭಾಗಗಳಿದ್ದು, ಪ್ರತಿಯೊಂದು ಚರಣದ ನಂತರವೂ ಪಲ್ಲವಿಯನ್ನು ಎತ್ತಿಕೊಳ್ಳಲಾಗುವುದು. ಈ ರಚನೆಯಲ್ಲಿ ಸ್ವರಗಳೇ ಸಾಹಿತ್ಯದ ಪಾತ್ರವನ್ನು ವಹಿಸುತ್ತವೆ. ಸಾಹಿತ್ಯವಿದ್ದರೆ ಆ ರಚನೆಗಳನ್ನು ಸ್ವರಜತಿಯೆಂದು ಕರೆಯಲಾಗುತ್ತದೆ. ಜತಿಸ್ವರಕ್ಕೆ ಸ್ವರಪಲ್ಲವಿ ಎಂಬ ಹೆಸರು ಉಂಟು.

## ಸಭಾಗಾನ ರಚನೆಗಳು :-

**ತಾನವರ್ಣ** : ವಿವಿಧ ಜಾತಿಗಳಲ್ಲಿ ಸಂಯೋಜಿತವಾದ ಸ್ವರಗಳ್ಳುಳ್ಳ ವಿಶೇಷ ರಚನೆಗೆ ವರ್ಣವೆಂದು ಹೆಸರು. ವರ್ಣಗಳಲ್ಲಿ ರಾಗದ ರಂಜಕ ಮತ್ತು ವಿಶೇಷ ಪ್ರಯೋಗಗಳು ಕಡ್ಡಾಯವಾಗಿ ಬರುತ್ತವೆ. ಸಾಹಿತ್ಯವು ಅಲ್ಪವಾಗಿದ್ದು ಆಕಾರ, ಇಕಾರ ಮುಂತಾದವನ್ನು ಹೆಚ್ಚಾಗಿ ಹೊಂದಿದ್ದು, ವ್ಯಂಜನಾಕ್ಷರಗಳನ್ನು ಕಡಿಮೆಯಾಗಿ ಹೊಂದಿರುತ್ತದೆ. ಪಲ್ಲವಿ, ಅನುಪಲ್ಲವಿ, ಚಿಟ್ಟೆಸ್ವರಗಳು ಪೂರ್ವಾಂಗದಲ್ಲಿದ್ದು, ಉತ್ತರಾಂಗದಲ್ಲಿ ಚರಣ ಮತ್ತು ಎತ್ತುಗಡೆಸ್ವರಗಳನ್ನು ವರ್ಣವು ಹೊಂದಿರುತ್ತದೆ.

ಸಾಹಿತ್ಯವು ಶೃಂಗಾರವಾಗಿರಬಹುದು ಅಥವಾ ಭಕ್ತಿ ಪ್ರಧಾನವಾಗಿರಬಹುದು. ಪೂರ್ವಾಂಗ ಮತ್ತು ಉತ್ತರಾಂಗಗಳು ಪ್ರತ್ಯೇಕವಾಗಿದ್ದು, ಪೂರ್ವಾಂಗದಲ್ಲಿ ಪಲ್ಲವಿ, ಅನುಪಲ್ಲವಿ, ಚಿಟ್ಟೆಸ್ವರಗಳನ್ನು ನಿರೂಪಿಸಿ, ನಂತರ ಪಲ್ಲವಿಯ ಒಂದು ಅವರ್ತವನ್ನು ಹಾಡಿ/ನುಡಿಸಿ ಪೂರ್ವಾಂಗವನ್ನು ಮುಗಿಸಬೇಕು. ಉತ್ತರಾಂಗದಲ್ಲಿ ಚರಣವನ್ನು ಒಂದಾವರ್ತಿ ನಿರೂಪಿಸಿ, ಎತ್ತುಗಡೆಸ್ವರಗಳನ್ನು ಹಾಡಿ/ನುಡಿಸಬೇಕು. ಪ್ರತಿಯೊಂದು ಎತ್ತುಗಡೆಸ್ವರವನ್ನು ನಿರೂಪಿಸಿದ ನಂತರ ಚರಣವನ್ನು ಎತ್ತಿಕೊಳ್ಳಬೇಕು. ಹೆಚ್ಚಾಗಿ ತಾನವರ್ಣಗಳು ಆದಿತಾಳ, ಅಟತಾಳ, ಝಂಪೆತಾಳ, ತ್ರಿಪುಟತಾಳಗಳಲ್ಲಿ ರಚಿತವಾಗಿವೆ.

**ಕೃತಿ** : ಕೃತಿಯೆಂಬುದು ಸಂಗೀತ ರಚನೆಯ ಒಂದು ಪ್ರಕಾರ. ಕೃತಿಯಲ್ಲಿ ಪಲ್ಲವಿ, ಅನುಪಲ್ಲವಿ, ಚರಣಗಳೆಂಬ ಭಾಗಗಳಿರುತ್ತವೆ. ಕೆಲವು ಕೃತಿಗಳಲ್ಲಿ ಚಿಟ್ಟೆಸ್ವರವೆಂಬ ವಿಶೇಷ ಭಾಗವು ಇರುತ್ತದೆ. ಸಂಗೀತವೇ ಪ್ರಧಾನವಾದ ರಚನೆ. ಸಾಹಿತ್ಯವು ಭಕ್ತಿಪ್ರಧಾನವಾಗಿರುತ್ತದೆ. ಸಂಗತಿಗಳು, ಕೃತಿಗಳ ಅಂದವನ್ನು ಹೆಚ್ಚಿಸುತ್ತವೆ.ವಿವಿಧ ತಾಳಗಳಲ್ಲೂ, ಸಮ ಮತ್ತು ವಿಷಮಗ್ರಹಗಳಲ್ಲೂ, ಅನೇಕ ರಾಗಗಳಲ್ಲೂ, ತೆಲಗು, ಸಂಸ್ಕೃತ, ಕನ್ನಡ, ತಮಿಳು, ಮಲೆಯಾಳಿ ಭಾಷೆಗಳಲ್ಲೂ ಕೃತಿಗಳು ರಚಿತವಾಗಿವೆ. ಧಾತುಪ್ರಧಾನವಾದುದು ಕೃತಿ.

**ಕೀರ್ತನೆ** : ಕೀರ್ತನೆಯು ಭಕ್ತಿ ಪ್ರಧಾನವಾದ ರಚನೆ, ಇದರಲ್ಲಿ ಪಲ್ಲವಿ ಮತ್ತು ಚರಣಗಳೆಂಬ ಭಾಗಗಳಿದ್ದು, ಕೆಲವು ಕೀರ್ತನೆಗಳಲ್ಲಿ ಅನುಪಲ್ಲವಿಯೂ ಇರುತ್ತದೆ. ಕೀರ್ತನೆಗಳು ಕನ್ನಡ, ತಮಿಳು, ತೆಲುಗು, ಸಂಸ್ಕೃತ, ಮಲೆಯಾಳ ಭಾಷೆಗಳಲ್ಲಿದ್ದು, ಆದಿತಾಳ, ರೂಪಕತಾಳ ಮತ್ತು ಛಾಪುತಾಳಗಳಲ್ಲಿರುತ್ತವೆ. ಕನ್ನಡದಲ್ಲಿರುವ ಹರಿದಾಸರ ಕೀರ್ತನೆಗಳನ್ನು ದೇವರನಾಮವೆಂದು ಕರೆಯುವುದು ವಾಡಿಕೆ, ಸಾಹಿತ್ಯ ಪ್ರಧಾನವಾದ ಈ ರಚನೆಯಲ್ಲಿ ಸಂಗತಿಗಳು ಹೆಚ್ಚಾಗಿರುವುದಿಲ್ಲ. ಮಾತುಪ್ರಧಾನವಾದುದು ಕೀರ್ತನೆ.

**ವಚನ** : ವಚನವೆಂದರೆ ಮಾತು. ಗದ್ಯ ಅಥವಾ ಪದ್ಯ ರೂಪದಲ್ಲಿರುವ ಸಾಹಿತ್ಯವನ್ನು ರಾಗ, ತಾಳಗಳಿಗೆ ಅಳವಡಿಸಿ ಗಾಯಕರ/ವಾದಕರ ಮನೋಧರ್ಮಕ್ಕನುಗುಣವಾಗಿ ನಿರೂಪಿಸಲಾಗುತ್ತದೆ. ಕೃತಿ, ಕೀರ್ತನೆಗಳಂತೆ ಈ ರಚನೆಗೆ ವಿಶೇಷ ಲಕ್ಷಣವನ್ನು ಸೂಚಿಸಿಲ್ಲ. ವಚನಗಳನ್ನು ಎಲ್ಲ ಸಂಗೀತ ರಚನೆಗಳ ಲಕ್ಷಣಕ್ಕೆ ಹೊಂದಿಸಿ ಹಾಡುವ ಸ್ವಾತಂತ್ರ್ಯವಿದೆ. ಯಾವ ಸಂಗೀತ ಪದ್ಧತಿಯಲ್ಲಾದರೂ ವಚನಗಳನ್ನು ನಿರೂಪಿಸಬಹುದು. ತಾಳವಿಲ್ಲದೆಯೂ ವಚನಗಳನ್ನು ಹಾಡಬಹುದು. ಶಿವಶರಣರಾದ ಬಸವಣ್ಣ, ಅಕ್ಕಮಹಾದೇವಿ, ಅಲ್ಲಮಪ್ರಭು, ನಿಜಗುಣಶಿವಯೋಗಿ ಮುಂತಾದವರು ವಚನಗಳನ್ನು ರಚಿಸಿದ್ದಾರೆ. ಕನ್ನಡಕ್ಕೇ ಮೀಸಲಾದ ರಚನೆ, ವಚನಗಳು.

# ಅಧ್ಯಾಯ - 7

## ಸಂಗೀತ ಲಿಪಿ ಬರವಣಿಗೆ

ಸಂಗೀತ ರಚನೆಗಳನ್ನು ಸ್ವರಪಡಿಸಿ ಬರೆಯುವ ಕ್ರಮಕ್ಕೆ **ಸಂಗೀತಲಿಪಿ** ಎನ್ನುತ್ತಾರೆ. ಸಂಗೀತ ರಚನೆಗಳನ್ನು ನೆನಪಿನಲ್ಲಿಡಲು ಸಂಗೀತ ಲಿಪಿಯು ಸಹಾಯಕವಾಗುತ್ತದೆ. ಸಂಕೇತಗಳನ್ನು ಬಳಸಿಕೊಂಡು ಸಂಗೀತ ರಚನೆಗಳನ್ನು ಯಾವ ಭಾಷೆಯಲ್ಲಾದರೂ ಬರೆಯಬಹುದಾಗಿದೆ. ವಿದ್ಯಾರ್ಥಿಗಳು ಈ ಲಿಪಿಯ ಮೂಲಕ ಸ್ವರಸ್ಥಾನಗಳು, ಸ್ವರಗಳ ಏರಿಳಿತ, ತಾಳ, ಕಾಲಪ್ರಮಾಣ ಗಮಕಪ್ರಯೋಗಗಳನ್ನು ತಿಳಿಯಲು ಸಹಕಾರಿಯಾಗಿದೆ.

ಕರ್ನಾಟಕ ಸಂಗೀತದಲ್ಲಿ ಸಂಗೀತ ರಚನೆಗಳನ್ನು ಸ್ವರಪಡಿಸಿ ಬರೆಯಲು ಈ ಕೆಳಕಂಡ ಕ್ರಮವನ್ನು ಅನುಸರಿಸುವುದು.

1. ರಚನೆಯ ರಾಗ ಮತ್ತು ತಾಳವನ್ನು ಸಂಗೀತ ರಚನೆಯ ಮೇಲ್ಭಾಗದಲ್ಲಿ ಬರೆಯುವುದು.
2. ಕೃತಿ ರಚನೆಯ ಕಾಲವನ್ನು ಸೂಚಿಸುವುದು. (ಮಧ್ಯಮ, ವಿಳಂಬ,)
3. ರಾಗದ ಆರೋಹಣ ಮತ್ತು ಅವರೋಹಣವನ್ನು ಸ್ವರಸ್ಥಾನಗಳೊಂದಿಗೆ ಸೂಚಿಸುವುದು.
4. ರಚನಾಕಾರರು/ವಾಗ್ಗೇಯಕಾರರ ಹೆಸರನ್ನು ಸೂಚಿಸುವುದು.
5. ರಾಗವು ಜನಕವಾಗಿದ್ದರೆ ಮೇಳದ ಸಂಖ್ಯೆಯನ್ನು, ಜನ್ಯವಾಗಿದ್ದರೆ ಸಂಬಂದಪಟ್ಟ ಮೇಳವನ್ನು ಸೂಚಿಸುವುದು.
6. ಸಾಹಿತ್ಯವನ್ನುಳ್ಳ ರಚನೆಗಳಲ್ಲಿ ಸಾಹಿತ್ಯವನ್ನು ಸೂಚಿಸಬೇಕು. ತದನಂತರ ಸಂಗೀತ ರಚನೆಗಳನ್ನು ಸ್ವರಕ್ಕೆ ಅಳವಡಿಸಿ ಸಂಕೇತಗಳೊಂದಿಗೆ ಕಾಲಪ್ರಮಾಣವನ್ನು ಸೂಚಿಸಿ ಬರೆಯಬೇಕು.

ಉದಾ : ಸ - 1 ಅಕ್ಷರಕಾಲ ಹ್ರಸ್ವಾಕ್ಷರ

ಸಾ - 2 ಅಕ್ಷರಕಾಲ ದೀರ್ಘಾಕ್ಷರ

ಸಾ, - 3 ಅಕ್ಷರಕಾಲ, ದೀರ್ಘಾಕ್ಷರದ ಮುಂದೆ ಅಲ್ಪ ವಿರಾಮ ಚಿಹ್ನೆ

ಸಾ; - 4 ಅಕ್ಷರಕಾಲ, ದೀರ್ಘಾಕ್ಷರದ ಮುಂದೆ ಅರ್ಧವಿರಾಮ ಚಿಹ್ನೆ

ಸಾ;, - 5 ಅಕ್ಷರಕಾಲ, ದೀರ್ಘಾಕ್ಷರದ ಮುಂದೆ ಅರ್ಧವಿರಾಮ ಮತ್ತು ಅಲ್ಪ ವಿರಾಮ ಚಿಹ್ನೆ

ಸಾ;; - 6 ಅಕ್ಷರಕಾಲ, ದೀರ್ಘಾಕ್ಷರದ ಮುಂದೆ ಎರಡು ಅರ್ಧವಿರಾಮ ಚಿಹ್ನೆ

**ಕಾಲ :**

ಉದಾ : ಮೊದಲನೆಯ ಕಾಲ- ಸ ರಿ ಗ ಮ ಪ ದ ನಿ ಸೆ

ಎರಡನೆಯ ಕಾಲ - ಸ ರಿ ಗ ಮ ಪ ದ ನಿ ಸೆ

ಮೂರನೆಯ ಕಾಲ - ಸ ರಿ ಗ ಮ ಪ ದ ನಿ ಸೆ

ನಾಲ್ಕನೆಯ ಕಾಲ - ಸ ರಿ ಗ ಮ ಪ ದ ನಿ ಸೆ

| ಗಮನಿಸಿ | ತಾಳ ಹಾಗೂ ಕಾಲ, ಸ್ಥಾಯಿ, ಸಂಕೇತಗಳನ್ನು ಸೂಚಿಸುವ ಕ್ರಮಗಳನ್ನು ಅಧ್ಯಾಯ 3 ಹಾಗೂ ಅಧ್ಯಾಯ 5 ರಲ್ಲಿ ವಿವರಿಸಲಾಗಿದೆ. ಈ ಕ್ರಮವನ್ನು ಸ್ವರಲಿಪಿ ಬರವಣಿಗೆಯಲ್ಲಿ ಉಪಯೋಗಿಸಬಹುದಾಗಿದೆ. |
|---|---|

**ಸ್ವರಾವಳಿಗಳ ಲಿಪಿ ಬರವಣಿಗೆ :**

(ಅ) ಸರಳೆವರಸೆ :-

ಮೊದಲನೆಯ ಕಾಲ- ‖ ಸ ರಿ ಗ ಮ | ಪ ದ | ನಿ ಸೆ ‖
‖ ಸೆ ನಿ ದ ಪ | ಮ ಗ | ರಿ ಸ ‖

ಎರಡನೆಯ ಕಾಲ - ‖ ಸರಿ ಗಮ ಪದ ನಿಸೆ
ಸೆನಿ ದಪ | ಮಗ ರಿಸ ‖

ಮೂರನೆಯ ಕಾಲ - ‖ ಸರಿಗಮ ಪದನಿಸೆ ಸೆನಿದಪ ಮಗರಿಸ
ಸರಿಗಮ ಪದನಿಸೆ | ಸೆನಿದಪ ಮಗರಿಸ ‖

ಇದೇ ಕ್ರಮವನ್ನು ಜಂಟಿವರಸೆಗಳು ಹಾಗೂ ಅಲಂಕಾರಗಳನ್ನು ಬರೆಯಲು ಅನುಸರಿಸುವುದು.

**ಗೀತೆ :**

॥ ಸೆ ಸೆ ಸೆ । ನಿ ದ । ನಿ ಸೆ ॥ ನಿ ದ ಪ । ದಪ । ಮ ಪ ॥ ಗ ಮ ಪ । ಪದ । ದನಿ ॥ ದಪಮ । ಪ ಗ । ರಿ ಸ ॥
॥ ಕ ಮಲ । ಜಾ . । ದಳ ॥ ವಿಮಲ । ಸುನ । ಯ ನ ॥ ಕ ರಿ ವ । ರದ । ಕರು ॥ ಣಾಂಬು । ದೇ .। . . ॥

॥ ಧನಿಧ । ಗ ರಿ । ಗಾ ॥ ಮಪಾ । ಮಗ । ರಿ ಸ ॥ ರಿ ಸ ರಿ । ಸಾ । ಸಾ ॥
॥ ಕರುಣ । ಶ ರ । ಧೇ ॥ ಕ ಮ । ಲಾ . ।. . ॥ ಕಾಂ . । ತ । . ॥

## ಅಧ್ಯಾಯ -8

# ಸಂಗೀತ ವಾದ್ಯಗಳ ವರ್ಗೀಕರಣ

''ಗೀತಂ ಚತುರ್ವಿಧಾತ್ ವಾದ್ಯಾತ್ ಜಾಯತೆ ಚೋಪರಜ್ಯತೇ।
ತತ್ತತಂ ಸುಶಿರಂಚ ಅವನದ್ಧಂ ಘನಮಿತಿಸ್ಮೃತಂ॥''

ಅತ್ಯಂತ ಪ್ರಾಚೀನ ಕಾಲದಿಂದಲೂ ಸಂಗೀತವಾದ್ಯಗಳನ್ನು ಮೇಲೆ ತಿಳಿಸಿದಂತೆ ನಾಲ್ಕು ವಿಧವಾಗಿ ವಿಂಗಡಿಸಲಾಗಿದೆ. ಅವು ತತ, ಸುಷಿರ, ಅವನದ್ಧ ಹಾಗೂ ಘನವಾದ್ಯಗಳು.




ವೇದಗಳ ಕಾಲದಿಂದಲೇ ಬಳಕೆಯಲ್ಲಿದ್ದ ವಾದ್ಯಗಳೆಂದರೆ ವೀಣೆ, ವೇಣು ಹಾಗೂ ಮೃದಂಗ. ತಂತಿ ವಾದ್ಯಗಳನ್ನೆಲ್ಲಾ ವೀಣೆಯೆಂದೇ ಕರೆಯುತ್ತಿದ್ದ ಕಾಲವೊಂದಿತ್ತು. ಸಂಗೀತ ವಾದ್ಯಗಳ ವೈವಿಧ್ಯತೆ ಹಾಗೂ ಸಂಖ್ಯೆ ಹೆಚ್ಚಾದಂತೆಲ್ಲಾ, ಅವುಗಳ ವರ್ಗೀಕರಣವು ಅವಶ್ಯಕವೆನಿಸಿತು. ಭರತನ ನಾಟ್ಯಶಾಸ್ತ್ರದಲ್ಲಿ ಮೊದಲ ಬಾರಿಗೆ ಸಂಗೀತವಾದ್ಯಗಳನ್ನು ಮೇಲೆ ತಿಳಿಸಿದಂತೆ ನಾಲ್ಕು ವಿಧವಾಗಿ ವಿಂಗಡಿಸಲಾಗಿದೆ. ''ಸಂಗೀತ ಮಕರಂದ'' ಎಂಬ ಗ್ರಂಥದಲ್ಲಿ ನಾರದರು ಸಂಗೀತ ವಾದ್ಯಗಳನ್ನು ಶಾರೀರಜ, ನಖಜ, ವಾಯುಜ, ಚರ್ಮಜ ಹಾಗೂ ಲೋಹಜಗಳೆಂದು ವಿಂಗಡಿಸಿರುವುದು ತಿಳಿದುಬಂದಿದೆ.

## ತತ ವಾದ್ಯ

ತಂತಿಯಿಂದ ನಾದೋತ್ಪನ್ನ ಮಾಡುವ ವಾದ್ಯಗಳೇ ತತವಾದ್ಯ ಅಥವಾ ತಂತಿ ವಾದ್ಯಗಳು. ನಾದೋತ್ಪತ್ತಿಯ ಆಧಾರದ ಮೇಲೆ ಈ ವಾದ್ಯಗಳನ್ನು ಮೂರು ರೀತಿಯಲ್ಲಿ ಕೆಳಕಂಡಂತೆ ಉಪವರ್ಗೀಕರಿಸಬಹುದು. ಅವುಗಳು,

i) ಮೀಟಿನಿಂದ ನಾದೋತ್ಪನ್ನವಾಗುವವು.

ii) ಕಮಾನಿನಿಂದ ನಾದೋತ್ಪನ್ನವಾಗುವವು ಮತ್ತು

iii) ಬಡಿತದಿಂದ ನಾದೋತ್ಪನ್ನವಾಗುವವು.

### i) ಮೀಟಿನಿಂದ ನಾದೋತ್ಪನ್ನವಾಗುವವು

ತಂತಿಯನ್ನು ಬೆರಳುಗಳಿಂದ, ಉಂಗುರ, ನಖಗಳಿಂದ ಅಥವಾ ಕೃತಕವಾಗಿ (Man made, artificial) ಮಾಡಲ್ಪಟ್ಟ ಸಾಧನಗಳಿಂದಾಗಲೀ ಮೀಟುವುದರಿಂದ ನಾದೋತ್ಪತ್ತಿಯಾಗುತ್ತದೆ. (ಉದಾ : ದಂತದಿಂದ, ಕೊಂಬಿನಿಂದ ಮಾಡಿದ ಉಂಗುರಗಳು ಅಥವಾ ಲೋಹದಿಂದ ಮಾಡಲ್ಪಟ್ಟ ಉಂಗುರಗಳು.)

ಈ ತತ (ತಂತಿ) ವಾದ್ಯಗಳಿಗೆ ಕೆಲವು ಉದಾಹರಣೆಗಳೆಂದರೆ ತಂಬೂರಿ, ವೀಣೆ, ಹಾರ್ಪ್, ಸರೋದ್ ಏಕನಾದ ಇತ್ಯಾದಿ.



ತಂಬೂರಿ



ವೀಣೆ



ಸರೋದ್

ಮೀಟಿನಿಂದ ನಾದೋತ್ಪತ್ತಿ ಮಾಡುವ ತತವಾದ್ಯಗಳಲ್ಲಿ ಬಲಗೈ ಬೆರಳುಗಳಿಂದ ಮೀಟಿ, ಎಡಗೈ ಬೆರಳುಗಳಿಂದ ತಂತಿಯ ಮೇಲೆ ಕೊಡುವ ಮೃದುವಾದ ಒತ್ತಡದಿಂದ, ಬೇರೆ ಬೇರೆ ಸ್ವರಗಳನ್ನು ನುಡಿಸುವುದು, ಹೊರಹೊಮ್ಮಿಸುವುದು ರೂಢಿಯಲ್ಲಿದೆ. (ಹಾರ್ಪ್ ಎಂಬ ವಾದ್ಯಕ್ಕೆ ಮಾತ್ರ ಮೇಲೆ ತಿಳಿಸಿದ ಪದ್ಧತಿಯು ಅನ್ವಯಿಸುವುದಿಲ್ಲ.)

ಕರ್ನಾಟಕ ಸಂಗೀತದಲ್ಲಿ ವೀಣೆ, ಗೋಟುವಾದ್ಯ; ಹೀಗೆಯೇ ಹಿಂದೂಸ್ಥಾನಿಸಂಗೀತದ ಸಿತಾರ್, ಬೀನ್ ಮೊದಲಾದ ವಾದ್ಯಗಳನ್ನು ನುಡಿಸುವಾಗ ತಂತಿಯನ್ನು ಉಂಗುರದಿಂದಾಗಲೀ, ಬಲಗೈ ಬೆರಳುತುದಿಗೆ ಸಿಕ್ಕಿಸಿಕೊಂಡ ಕೃತಕ ಸಾಧನದಿಂದಾಗಲೀ ಮೀಟಲಾಗುತ್ತದೆ. ಹಿಂದೂಸ್ಥಾನಿ ಸಂಗೀತದ ಸರೋದ್, ಲಘು ಸಂಗೀತದಲ್ಲಿ ಬಳಸುವ ಬುಲ್ ಬುಲ್ ತರಂಗ್, ಪಾಶ್ಚಿಮಾತ್ಯ ದೇಶಗಳ ಗಿಟಾರ್, ಮ್ಯಾಂಡೋಲಿನ್, ಬ್ಯಾನ್‌ಜೋ ಮುಂತಾದವುಗಳನ್ನು ಪ್ರತ್ಯೇಕವಾದ ಪ್ಲಾಸ್ಟಿಕ್ ಕೊಂಬು ಅಥವಾ ದಂತದ ಚೂರಿನಿಂದ ಬಲಗೈನಿಂದ ಮೀಟಿ ನುಡಿಸಲಾಗುತ್ತದೆ. ಗಾಯನ ಅಥವಾ ವಾದನದಲ್ಲಿ ಶ್ರುತಿಗಾಗಿ ಉಪಯೋಗಿಸುವ ತಂಬೂರಿ ವಾದ್ಯವು ವಿಶಿಷ್ಟವಾದ ಸ್ಥಾನವನ್ನು ಹೊಂದಿದೆ.

**ಸೂಚನೆ** : ತತ ವಾದ್ಯಗಳಲ್ಲಿ ವೀಣೆ, ಸಿತಾರ್ ಇತ್ಯಾದಿ ಸಾರಿಕೆಗಳುಳ್ಳ (ಮೆಟ್ಟಿಲುಗಳುಳ್ಳ) ವಾದ್ಯಗಳಾದರೆ, ಗೋಟುವಾದ್ಯ, ಸರೋದ್ ಇತ್ಯಾದಿ ಸಾರಿಕೆಗಳಿಲ್ಲದ ವಾದ್ಯಗಳಾಗಿವೆ. ವೀಣೆಯು ಸ್ಥಿರವಾದ ಸಾರಿಕೆಗಳನ್ನು ಹೊಂದಿದ ವಾದ್ಯವಾದರೆ, ಸಿತಾರ್ ವಾದ್ಯವು ಅಸ್ಥಿರ (ಚಲಿಸುವ) ಸಾರಿಕೆಗಳನ್ನು ಹೊಂದಿದೆ.



ಮ್ಯಾಂಡೋಲಿನ್



ಗಿಟಾರ್

ii) ಕಮಾನಿನಿಂದ ನಾದೋತ್ಪನ್ನವಾಗುವವು



ಪಿಟೀಲು



ಸಾರಂಗಿ

ತಂತಿಗಳ ಮೇಲೆ, ಕಮಾನಿಗೆ ಕಟ್ಟಿರುವ ಕೂದಲಿನ (ಕುದುರೆಬಾಲದ ಕೂದಲು ಅಥವಾ ನೈಲಾನ್ ದಾರದಿಂದ ತಯಾರಿಸಲ್ಪಟ್ಟಿದ್ದು.) ಭಾಗವನ್ನು ಬಲಗೈನಿಂದ ನಯವಾಗಿ ಒಂದೇಸಮನೆ ತೀಡಿ, ಉಜ್ಜುವುದರಿಂದ ನಾದೋತ್ಪತ್ತಿಯಾಗುತ್ತದೆ. ಎಡಗೈ ಬೆರಳುಗಳ ತುದಿಗಳಿಂದ, ತಂತಿಗಳನ್ನು ವಿವಿಧ ಸ್ಥಾನಗಳಲ್ಲಿ ಒತ್ತುವುದರಿಂದ ಬೇರೆ ಬೇರೆ ಸ್ವರಗಳನ್ನು ಹೊರಹೊಮ್ಮಿಸಬಹುದು.

ಪಿಟೀಲು, ಸಾರಂಗಿ, ವಯೋಲ, ದಿಲ್‌ರುಬಾ, ಸುರ್‌ಬಹಾರ್ ಇತ್ಯಾದಿ ವಾದ್ಯಗಳು ಈ ಗುಂಪಿಗೆ ಸೇರುತ್ತವೆ.

iii) ಬಡಿತದಿಂದ ನಾದೋತ್ಪನ್ನವಾಗುವವು



ಸಂತೂರ್



ಗೆತ್ತುವಾದ್ಯ

ಲೋಹದಿಂದ ಮಾಡಲ್ಪಟ್ಟಿರುವ ಸುತ್ತಿಗೆ ಅಥವಾ ಕಡ್ಡಿಯ ಆಕಾರದಲ್ಲಿರುವ ಸಲಕರಣೆಗಳನ್ನು ತಂತಿಗಳ ಮೇಲೆ ಮೃದುವಾಗಿ ಉಪಯೋಗಿಸಿದಾಗ, ನಾದವನ್ನು ಉತ್ಪತ್ತಿ ಮಾಡುವ ವಾದ್ಯಗಳು ಮೇಲಿನ ಗುಂಪಿಗೆ ಸೇರುತ್ತವೆ.

ಪಿಯಾನೋ, ಜೈಲೋಫೋನ್ (Xylophone) ಪಾಶ್ಚಿಮಾತ್ಯದೇಶದ ವಾದ್ಯಗಳಾದರೆ ಸಂತೂರ್ ನಮ್ಮ ದೇಶದ ವಾದ್ಯವೆಂದು ಮೇಲಿನ ಗುಂಪಿಗೆ ಉದಹರಿಸಬಹುದು.

*ಸೂಚನೆ* : ಗೆತ್ತು ವಾದ್ಯವು ಕೂಡ ಮೇಲಿನ ಗುಂಪಿಗೆ ಸೇರುತ್ತದೆ. ಇದು ತಂತಿಗಳುಳ್ಳ ಲಯ(ತಾಳ)ವಾದ್ಯ. ಈ ವಾದ್ಯವನ್ನು ಎರಡು ಮರದಕಡ್ಡಿಗಳಿಂದ ಬಡಿದು ನುಡಿಸುತ್ತಾರೆ.

## ಸುಷಿರ ವಾದ್ಯಗಳು

ಬಿದಿರು, ಮರ ಅಥವಾ ಲೋಹದಿಂದ ನಿರ್ಮಿತವಾದ ಕೊಳವೆಯಲ್ಲಿ ಗಾಳಿಯನ್ನು ಊದಿ ತುಂಬುವುದರಿಂದ ನಾದೋತ್ಪತ್ತಿಯಾಗುತ್ತದೆ. ಹೀಗೆ ಗಾಳಿಯ ಮೂಲಕ ನಾದವನ್ನು ಉತ್ಪತ್ತಿ ಮಾಡುವ ವಾದ್ಯಗಳಿಗೆ ಸುಷಿರವಾದ್ಯಗಳೆಂದು ಹೆಸರು. ಕೊಳವೆಯ ಮೇಲೆ ಒಂದಕ್ಕೊಂದು ಅಂತರವಿರುವಂತೆ ಕೊರೆಯಲಾದ ರಂಧ್ರಗಳನ್ನು ಬೆರಳುಗಳಿಂದ ಮುಚ್ಚುವ ಮತ್ತು ತೆಗೆಯುವ ವಿಧಾನದಿಂದ ವಿವಿಧ ಸ್ವರಗಳನ್ನು ನುಡಿಸಬಹುದಾಗಿದೆ.

ಗಾಳಿವಾದ್ಯಗಳನ್ನು ಮೂರು ವಿಧವಾಗಿ ವಿಂಗಡಿಸಬಹುದು.

ಅ) ಪ್ರತ್ಯೇಕ ಪೀಪಿಯುಳ್ಳದ್ದು

ಆ) ಪ್ರತ್ಯೇಕ ಪೀಪಿ ಇಲ್ಲದಿರುವುದು

ಇ) ತಿದಿಯ ಗಾಳಿಯಿಂದ ನಾದವನ್ನು ಉತ್ಪತ್ತಿಮಾಡುವವು.

### ಅ) ಪ್ರತ್ಯೇಕ ಪೀಪಿಯುಳ್ಳದ್ದು



ನಾಗಸ್ವರ



ಕ್ಲಾರಿಯೋನೆಟ್

ಮುಖರಂಧ್ರದಲ್ಲಿ ಗಾಳಿಯನ್ನು ಊದಲು ಪ್ರತ್ಯೇಕ ಪೀಪಿಯನ್ನು ಅಳವಡಿಸಿರುತ್ತಾರೆ. ಈ ವಾದ್ಯಗಳಲ್ಲಿ ಕೆಳತುದಿ ಅಗಲವಾದ ಬಾಯನ್ನು ಹೊಂದಿರುತ್ತದೆ. ಕೊಳವೆಯ ಮೇಲೆ ಬೇರೆ ಬೇರೆ ಅಂತರಗಳಲ್ಲಿ ರಂಧ್ರಗಳನ್ನು ಮಾಡಿರುತ್ತಾರೆ. ಈ ಮೂಲಕ ಬೇರೆ ಬೇರೆ ಸ್ವರಗಳನ್ನು ಉತ್ಪತ್ತಿ ಮಾಡಲು ಸಾಧ್ಯವಾಗುತ್ತದೆ. ವಾದಕನು ಪೀಪಿಯನ್ನು ತನ್ನ ತುಟಿಗಳ ಮಧ್ಯದಲ್ಲಿರಿಸಿ, ವಾದ್ಯವನ್ನು ಎದುರಿಗೆ ಇಟ್ಟುಕೊಂಡು ನುಡಿಸುತ್ತಾನೆ

ಉದಾಹರಣೆಗೆ : ನಾಗಸ್ವರ, ಮುಖವೀಣೆ, ಶಹನಾಯಿ, ಸ್ಯಾಕ್ಸೋಫೋನ್, ಕ್ಲಾರಿಯೊನೆಟ್ ಇತ್ಯಾದಿ

### ಆ) ಪ್ರತ್ಯೇಕ ಪೀಪಿ ಇಲ್ಲದಿರುವುದು



ಕೊಳಲು

ಈ ವಾದ್ಯಗಳಲ್ಲಿ ವಾದಕನು ಪ್ರತ್ಯೇಕ ಪೀಪಿಯನ್ನು ಉಪಯೋಗಿಸದೆ, ಗಾಳಿಯನ್ನು ನೇರವಾಗಿ ವಾದ್ಯದ ಮುಖರಂಧ್ರದಲ್ಲಿ ತುಟಿಯಿರಿಸಿ ಊದುವ ಮೂಲಕ ನಾದೋತ್ಪತ್ತಿಯನ್ನು ಮಾಡುತ್ತಾನೆ.

ಉದಾಹರಣೆಗೆ : ಕೊಳಲು, ಬಾನ್ಸುರಿ ಇತ್ಯಾದಿ

ಇ) ತಿದಿಯ ಗಾಳಿಯಿಂದ ನಾದೋತ್ಪನ್ನವಾಗುವವು



ಈ ವಾದ್ಯಗಳಲ್ಲಿ ವಾದಕನು ತನ್ನ ಉಸಿರಿನಿಂದ ಗಾಳಿಯನ್ನು ಉತ್ಪತ್ತಿಮಾಡದೆ ಪ್ರತ್ಯೇಕವಾಗಿ ತಿದಿಯನೊತ್ತಿ ನಾದವನ್ನು ಉತ್ಪತ್ತಿ ಮಾಡುತ್ತಾನೆ.

ಉದಾ : ಹಾರ್ಮೋನಿಯಂ, ಅಕಾರ್ಡಿಯನ್ ಇತ್ಯಾದಿ

ಸೂಚನೆ

* ಸುಷಿರ ವಾದ್ಯಗಳಲ್ಲಿ ಶ್ರುತಿ ಪೆಟ್ಟಿಗೆಯು ಒಂದು ಶ್ರುತಿ ವಾದ್ಯ
* ಪ್ರತ್ಯೇಕ ಪೀಪಿಯಿಲ್ಲದ ಹಾಗೂ ರಂಧ್ರವಿಲ್ಲದ ವಾದ್ಯಕ್ಕೆ ಉದಾಹರಣೆಗಳು : ಶಂಖ, ಕೊಂಬು, ಕಹಳೆ ಇತ್ಯಾದಿ
* ಪ್ರತ್ಯೇಕ ರೀಡ್‌ಗಳಿಲ್ಲದೆ ರಂಧ್ರಗಳಿರುವ ವಾದ್ಯಗಳಿಗೆ ಉದಾಹರಣೆ : ಕೊಳಲು, ನಾಗಸ್ವರ, ಮುಖವೀಣೆ ಮುಂತಾದವು.
* ಪ್ರತ್ಯೇಕ ಪೀಪಿಗಳಿದ್ದು ಕೀಗಳನ್ನು ಅಳವಡಿಸಿಕೊಂಡಿರುವ ವಾದ್ಯಗಳು ಸ್ಯಾಕ್ಸೋಫೋನ್, ಕ್ಲಾರಿಯೊನೆಟ್ ಮುಂತಾದವು

## ಅವನದ್ಧ ವಾ ದ್ಯಗಳು

ಎಳೆದು ಕಟ್ಟಿರುವ ಚರ್ಮವನ್ನು ತಟ್ಟುವುದರ ಮೂಲಕ ನಾದೋತ್ಪತ್ತಿಯಾಗುವ ವಾದ್ಯಗಳನ್ನು ಚರ್ಮವಾದ್ಯ ಅಥವಾ ಅವನದ್ಧ ವಾದ್ಯಗಳೆಂದು ಕರೆಯುತ್ತಾರೆ. ಈ ವಾದ್ಯಗಳು ಹೆಚ್ಚಾಗಿ ಲಯ ವಾದ್ಯಗಳಾಗಿರುತ್ತವೆ. ಈ ವಾದ್ಯಗಳು ಒಂದು ಅಥವಾ ಹೆಚ್ಚು ಮುಖಗಳನ್ನು ಹೊಂದಿರುತ್ತವೆ. ಈ ವಾದ್ಯಗಳನ್ನು ಎರಡು ವಿಧವಾಗಿ ವಿಂಗಡಿಸಬಹುದು.

೧) ಬೆರಳಿನಿಂದ ನುಡಿಸಲ್ಪಡುವ ವಾದ್ಯಗಳು



ಮೃದಂಗ



ಖಂಜರಿ



ಖೋಲ್



ತಬಲಾ

ಈ ವಾದ್ಯಗಳಿಗೆ ಒಂದು ಅಥವಾ ಹೆಚ್ಚು ಮುಖವಿರುತ್ತದೆ. ಸಾಮಾನ್ಯವಾಗಿ ಈ ವಾದ್ಯಗಳನ್ನು ಶಾಸ್ತ್ರೀಯ ಸಂಗೀತದಲ್ಲಿ ಉಪಯೋಗಿಸುವುದು ರೂಢಿಯಲ್ಲಿದೆ. ವಾದಕನು ತನ್ನ ಬೆರಳುಗಳ ಸಹಾಯದಿಂದಲೇ ಈ ವಾದ್ಯಗಳನ್ನು ನುಡಿಸುತ್ತಾನೆ.

ಉದಾ : ಮೃದಂಗ, ಖಂಜರಿ, ತಬಲಾ, ಪಖಾವಾಜ್, ಖೋಲ್, ಕಾಂಗೊ, ಡೋಲಕ್ ಮುಂತಾದವು.

ಈ ಗುಂಪಿನಲ್ಲಿ ತಿಳಿಸಿರುವ ಅನೇಕ ವಾದ್ಯಗಳು ಶ್ರುತಿ ಮಾಡಿ ನುಡಿಸಲ್ಪಡುತ್ತವೆ.

### ೨) ಕಡ್ಡಿ ಅಥವಾ ಕೋಲುಗಳಿಂದ ನುಡಿಸಲ್ಪಡುವ ವಾದ್ಯಗಳು



ಡೋಲು



ನಗಾರಿ



ಚಂಡೆ

ವಾದಕನು ಈ ವಾದ್ಯಗಳನ್ನು ಕೋಲು ಅಥವಾ ಕಡ್ಡಿಗಳಿಂದ ನುಡಿಸುತ್ತಾನೆ. ಸಾಮಾನ್ಯವಾಗಿ ಈ ವಾದ್ಯಗಳನ್ನು ಶ್ರುತಿ ಮಾಡಿ ನುಡಿಸುವ ಪದ್ಧತಿ ಬಳಕೆಯಲ್ಲಿಲ್ಲ. ಈ ವಾದ್ಯಗಳನ್ನು ಹೆಚ್ಚಾಗಿ ಅರಮನೆಗಳಲ್ಲಿ, ದೇವಾಲಯಗಳಲ್ಲಿ, ಯುದ್ಧ ಸಂದರ್ಭಗಳಲ್ಲಿ, ಮೆರವಣಿಗೆಗಳಲ್ಲಿ, ಸುದ್ದಿ ಪ್ರಸಾರ ಕಾರ್ಯಗಳಲ್ಲಿ ಹಾಗೂ ಹಬ್ಬ-ಹರಿದಿನಗಳಲ್ಲಿ ಉಪಯೋಗಿಸುತ್ತಾರೆ.

ಉದಾ : ನಗಾರಿ, ತಮ್ಮಟೆ, ಸಮ್ಮೇಳ, ಚಂಡೆ, ಡ್ರಮ್ಸ್, ಇತ್ಯಾದಿ

*ಸೂಚನೆ :*

* ತವಿಲ್ ಅಥವಾ ಡೋಲು, ಈ ವಾದ್ಯಕ್ಕೆ ಒಂದು ಮುಖದಲ್ಲಿ ಬೆರಳುಗಳನ್ನು ಉಪಯೋಗಿಸಿದರೆ ಇನ್ನೊಂದು ಮುಖದಲ್ಲಿ ಕೋಲನ್ನು ಬಳಸುತ್ತಾರೆ.
* ಎರಡು ಮುಖಗಳು ಪ್ರತ್ಯೇಕವಾಗಿ ಇರುವ ಶ್ರುತಿಯುತವಾದ್ಯ ತಬಲ. ಒಂದು ಭಾಗವು ತಬಲ ಎಂದೂ, ಮತ್ತೊಂದು ಬಾಯಾ ಎಂದೂ ಕರೆಯಲ್ಪಡುತ್ತದೆ.
* ಪಂಚಮುಖವಾದ್ಯವೆಂಬ ಐದು ಮುಖಗಳುಳ್ಳ ಚರ್ಮ ವಾದ್ಯವು ನಮ್ಮ ದೇಶದಲ್ಲಿ ಬಳಕೆಯಲ್ಲಿದೆ.

## ಘನವಾದ್ಯಗಳು

ಕಂಚು, ಹಿತ್ತಾಳೆ, ಕಬ್ಬಿಣ ಮುಂತಾದ ಲೋಹಗಳಿಂದ ತಯಾರಿಸಲ್ಪಟ್ಟ, ಮಣ್ಣಿನಿಂದ ತಯಾರಿಸಲ್ಪಟ್ಟ, ನಾದವನ್ನು ಹೊರಹೊಮ್ಮಿಸುವ ವಾದ್ಯಗಳನ್ನು ಘನ ವಾದ್ಯಗಳೆಂದು ಕರೆಯುತ್ತಾರೆ.

ಈ ವಾದ್ಯಗಳು ಒಂದೇ ಸ್ವರಕ್ಕೆ ಮಾಡಲ್ಪಟ್ಟಿರುವ ಕಾರಣ ಶ್ರುತಿ ಬದಲಾವಣೆ ಮಾಡುವುದು ಕಷ್ಟ. ಈ ವಾದ್ಯಗಳನ್ನು ಎರಡು ವಿಧವಾಗಿ ವಿಂಗಡಿಸಬಹುದು.,

೧. ಅಖಂಡ ವಾದ್ಯ
(ಒಂದೇ ಭಾಗದಿಂದ ಕೂಡಿರುವುದು)

೨. ಬಿಡಿ ಭಾಗಗಳಿಂದ ಕೂಡಿರುವ ವಾದ್ಯ (ಖಂಡ ವಾದ್ಯ)

## ೧. ಅಖಂಡ ವಾದ್ಯ



ಘಟ

ಈ ವಾದ್ಯಕ್ಕೆ ಒಂದೇ ಭಾಗ

ಉದಾ : (ಘಟ) ಮಣ್ಣಿನಿಂದ ತಯಾರಿಸಲ್ಪಟ್ಟ ಈ ವಾದ್ಯವು ಬೆರಳುಗಳಿಂದ ನುಡಿಸಲ್ಪಡುತ್ತದೆ.

## ೨. ಎರಡು ಭಾಗಗಳನ್ನು ಹೊಂದಿರುವವು.



ಮೋರ್ಚಿಂಗ್



ಜಾಗಟೆ



ಕಂಚಿನ ತಾಳ

ಒಂದೇ ವಸ್ತುವಿನಿಂದ ಅಥವಾ ಎರಡು ವಸ್ತುಗಳಿಂದ ನಿರ್ಮಿತವಾದ (ಕಂಚು, ಹಿತ್ತಾಳೆ) ಎರಡು ಭಾಗಗಳನ್ನು ಹೊಂದಿ, ಒಂದನ್ನು ಇನ್ನೊಂದರ ಮೇಲೆ ಬಡಿಯುವುದರ ಮೂಲಕ ನಾದವು ಉತ್ಪತ್ತಿಯಾಗುತ್ತದೆ.

ಉದಾ : ಮೋರ್ಚಿಂಗ್, ಘಂಟೆ, ನಟುವಾಂಗದಲ್ಲಿ ಬಳಸುವ ತಾಳ, ಜಾಗಟೆ, ಕಾಲ್ಗೆಜ್ಜೆ ಮುಂತಾದವು.

ಘನವಾದ್ಯದ ಗುಂಪಿಗೆ ಸೇರಿದ ಮೋರ್ಚಿಂಗ್ ವಾದ್ಯವನ್ನು ಬಾಯಲ್ಲಿ ಹಿಡಿದು, ಉಸಿರಿನಿಂದ ನಿಯಂತ್ರಿಸಿ, ಬೆರಳುಗಳಿಂದ ಮೀಟಿ ನುಡಿಸಲಾಗುತ್ತದೆ.



# ಅಧ್ಯಾಯ - 9

# ವಾಗ್ಗೇಯಕಾರರು

ಕರ್ನಾಟಕ ಸಂಗೀತದಲ್ಲಿ ವಾಗ್ಗೇಯಕಾರರ ಪಾತ್ರ ಹಿರಿದು. ಸಂಗೀತ ಶಾಸ್ತ್ರ ಪರಂಪರೆಯನ್ನು ಅವ್ಯಾಹತವಾಗಿ ಉಳಿಸಕೊಟ್ಟಿರುವವರೇ ವಾಗ್ಗೇಯಕಾರರು.

ಸಂಗೀತ ರಚನೆಗಳನ್ನು ರಚಿಸುವವರಿಗೆ ವಾಗ್ಗೇಯಕಾರರೆಂದು ಹೆಸರು. '**ವಾಚಂಗೇಯಂ ಚ ಕುರುತೇ ಯಸ್ಯ ಸಃ ವಾಗ್ಗೇಯಕಾರಕಃ**' ಎಂದು ಸಂಗೀತ ರತ್ನಾಕರದಲ್ಲಿ ಶಾರ್ಙ್ಗದೇವನು ತಿಳಿಸಿರುತ್ತಾನೆ. ಯಾರು ಸಾಹಿತ್ಯ ಮತ್ತು ಸಂಗೀತವನ್ನು ತಮ್ಮ ಕೌಶಲ್ಯದಿಂದ ರಚಿಸುವರೋ ಅವರೇ ವಾಗ್ಗೇಯಕಾರರು. ಉತ್ತಮ ವಾಗ್ಗೇಯಕಾರರಲ್ಲಿ ಈ ಗುಣವು ಉಚ್ಚಮಟ್ಟದ್ದಾಗಿರುತ್ತದೆ. ಮಧ್ಯಮ ವಾಗ್ಗೇಯಕಾರನು ಉತ್ತಮ ಸಂಗೀತಕ್ಕೆ ಮಧ್ಯಮಮಟ್ಟದ ಸಾಹಿತ್ಯವನ್ನು ರಚಿಸುವನು, ಬೇರೆಯವರ ಸಾಹಿತ್ಯಕ್ಕೆ ಸಂಗೀತವನ್ನು ರಚಿಸುವವನು. ಬೇರೆಯವರು ರಚಿಸಿದ ಸಂಗೀತಕ್ಕನುಗುಣವಾಗಿ ಸಾಹಿತ್ಯವನ್ನು ರಚಿಸುವವನನ್ನು ಅಧಮ ವಾಗ್ಗೇಯಕಾರನೆಂದು ಪರಿಗಣಿಸಲಾಗಿದೆ. ಇಂತಹ ಉತ್ತಮ ಮತ್ತು ಮಧ್ಯಮವರ್ಗಕ್ಕೆ ಸೇರುವ ಅನೇಕ ವಾಗ್ಗೇಯಕಾರರು ಕರ್ನಾಟಕ ಶಾಸ್ತ್ರೀಯ ಸಂಗೀತಕ್ಕೆ ತಮ್ಮ ಕೊಡುಗೆಯನ್ನಿತ್ತಿದ್ದಾರೆ. ಇಲ್ಲಿ ಕೆಲವರ ಜೀವನವನ್ನು ಮತ್ತು ಅವರ ಸಂಗೀತದ ಕೊಡುಗೆಯನ್ನು ಸಂಕ್ಷಿಪ್ತವಾಗಿ ತಿಳಿಸಲಾಗಿದೆ.

## ಹರಿದಾಸರು

### 1. ಶ್ರೀ ಪುರಂದರದಾಸರು (ಕ್ರಿ. ಶ. 1484 - 1564)

ಕರ್ನಾಟಕ ಸಂಗೀತ ಪಿತಾಮಹರೆನಿಸಿ ಇಂದಿಗೂ ಪೂಜ್ಯರಾಗಿರುವ ಶ್ರೀ ಪುರಂದರದಾಸರು ಕರ್ನಾಟಕ ಸಂಗೀತಕ್ಕೆ ತಳಪಾಯವನ್ನು ಹಾಕಿದವರು. ಅಭ್ಯಾಸಗಾನವನ್ನು ಕ್ರಮಪಡಿಸಿದ ಕೀರ್ತಿ ಶ್ರೀ ಪುರಂದರದಾಸರದ್ದು. ಇಂದಿಗೂ ಪ್ರತಿಯೊಬ್ಬ ವಿದ್ಯಾರ್ಥಿಯು ಸಂಗೀತದ ಬಾಲಪಾಠವನ್ನು ಪ್ರಾರಂಭಿಸುವುದು ದಾಸರು ರಚಿಸಿದ ಸ್ವರಾವಳಿಗಳು ಮತ್ತು ಗೀತೆಗಳಿಂದಲೇ. ದಾಸರು ರಚಿಸಿದ ಕೀರ್ತನೆ, ಉಗಾಭೋಗಗಳು ಸಾಮಾನ್ಯ ಜನರ ನುಡಿಗಳಲ್ಲೂ ಕಾಣುತ್ತವೆ. ದಾಸರು ತಮ್ಮ ಸಂಗೀತ ರಚನೆಗಳ ಮೂಲಕ ಜನಜಾಗೃತಿಯನ್ನು ಮೂಡಿಸಿ, ಲೌಕಿಕ ತತ್ವಗಳನ್ನು ಉಪದೇಶಿಸಿ, ಆಧ್ಯಾತ್ಮಿಕ ತತ್ವಗಳನ್ನು ಸರಳವಾಗಿ ನಿರೂಪಿಸಿ, ಭಾವೈಕ್ಯತೆಯನ್ನು ತಮ್ಮ ಕೀರ್ತನೆಗಳ ಮೂಲಕ ಸಾರಿದ್ದಾರೆ.

ಪುರಂದರಗಡದಲ್ಲಿದ್ದ ವರದಪ್ಪನಾಯಕ ಮತ್ತು ಲಕ್ಷ್ಮಕ್ಕ ದಂಪತಿಗಳಿಗೆ ಜನಿಸಿದ ಗಂಡುಮಗುವಿಗೆ ಶ್ರೀನಿವಾಸನಾಯಕನೆಂದು ನಾಮಕರಣ ಮಾಡಿದರು. ಬಾಲ್ಯದಲ್ಲಿಯೇ ಸಾಹಿತ್ಯ, ಸಂಗೀತ, ಸಂಸ್ಕೃತ, ವೇದ, ಪುರಾಣ ಉಪನಿಷತ್ತು ಹಾಗೂ ಅಲಂಕಾರ ಶಾಸ್ತ್ರಗಳಲ್ಲಿ ಅಧ್ಯಯನವನ್ನು ನಡೆಸಿ, ಪಾರಂಗತರಾದರು. ನಂತರ ತಂದೆಯ ಚಿನಿವಾರ ವೃತ್ತಿಯನ್ನೇ ಮುಂದುವರೆಸಿದರು. ಸುಸಂಸ್ಕೃತಳಾದ ಕನ್ಯೆ, ಸರಸ್ವತಿಯನ್ನು ಪ್ರಾಪ್ತವಯಸ್ಸಿನಲ್ಲಿ ಮದುವೆಯಾದರು.

ಕಾರಣಾಂತರದಿಂದ ಮೂಗುತಿಯ ಪ್ರಸಂಗ ಒದಗಿ ಬಂದು, ತಾವು ಗಳಿಸಿದ ಅಪಾರ ಐಶ್ವರ್ಯವನ್ನು ದಾನಮಾಡಿ, ವ್ಯಾಸರಾಯರ ಶಿಷ್ಯರಾದರು. ಪುರಂದರವಿಠಲನ ಭಕ್ತರಾಗಿ ಶ್ರೀ ಪುರಂದರದಾಸರೆನಿಸಿದರು. ತಾವು ರಚಿಸಿದ ಕೀರ್ತನೆಗಳನ್ನು ಹಾಡಿ ಜನಮನವನ್ನು ಗೆದ್ದರು.

ಕರ್ನಾಟಕ ಸಂಗೀತಕ್ಕೆ ಅವರಿತ್ತ ಕೊಡುಗೆ ಅಪಾರ. **ಪುರಂದರವಿಠಲ** ಅಂಕಿತದೊಡನೆ ಗೀತೆ, ಸೂಳಾದಿ, ಉಗಾಭೋಗ, ಕೀರ್ತನೆ, ವೃತ್ತನಾಮ, ಪದ, ಗದ್ಯ, ಶ್ಲೋಕಗಳೇ ಮುಂತಾದ ಹಲವಾರು ರಚನೆಗಳನ್ನು ಅಪಾರ ಸಂಖ್ಯೆಯಲ್ಲಿ ರಚಿಸಿದರು. ಅಭ್ಯಾಸಗಾನಕ್ಕೆ ಸೇರುವ ಸ್ವರಾವಳಿಗಳನ್ನು ಯೋಜಿಸಿ, ಮಾಯಾಮಾಳವಗೌಳ ರಾಗದಲ್ಲಿ ಪ್ರಾಥಮಿಕ ಪಾಠಗಳು ನಡೆಯುವಂತೆ ರೂಪಿಸಿದರು. ಕರ್ನಾಟಕ ಸಂಗೀತದ ಪಠ್ಯಕ್ರಮವನ್ನು ರೂಪಿಸಿದ ಕೀರ್ತಿ ಶ್ರೀ ಪುರಂದರದಾಸರಿಗೆ ಸಲ್ಲುತ್ತದೆ. ಈ ಪಾಠಕ್ರಮವು ಇಂದಿಗೂ ರೂಢಿಯಲ್ಲಿದೆ. ಇವರ ರಚನೆಗಳೆಲ್ಲವೂ ಹೆಚ್ಚಾಗಿ ಕನ್ನಡ ಭಾಷೆಯಲ್ಲಿದ್ದು, ಸಂಸ್ಕೃತ ಭಾಷೆಯಲ್ಲಿಯೂ ಕೆಲವು ರಚನೆಗಳಿವೆ. ತಮ್ಮ ಕಾಲದಲ್ಲಿ ಬಳಕೆಯಲ್ಲಿದ್ದ ರಾಗ, ತಾಳಗಳಲ್ಲೇ ರಚಿಸಿದ್ದಾರೆ. ದಾಸರ ಕೀರ್ತನೆಗಳನ್ನು ದಾಸರ ಪದಗಳು ಮತ್ತು ದೇವರನಾಮಗಳೆಂದೂ ಕರೆಯುತ್ತಾರೆ. ಸುಮಾರು 4¾ ಲಕ್ಷ ರಚನೆಗಳನ್ನು ರಚಿಸಿರುವರೆಂದು ವಿಜಯದಾಸರು ತಮ್ಮ ಕೀರ್ತನೆಯೊಂದರಲ್ಲಿ ತಿಳಿಸಿದ್ದಾರೆ. ಗುರುಗಳಾದ ವ್ಯಾಸರಾಯರು ಇವರ ಸಂಗೀತ ರಚನೆಗಳನ್ನು '**ಪುರಂದರೋಪನಿಷತ್**' ಎಂದು ಕರೆದರು. ನಾರದಾಂಶ ಸಂಭೂತರೆನಿಸಿ ಪುಷ್ಯ ಬಹುಳ ಅಮಾವಾಸ್ಯೆಯಂದು ಶ್ರೀಮನ್ನಾರಾಯಣನ ಪಾದಾರವಿಂದವನ್ನು ಸೇರಿದರು. ದೇಶದಾದ್ಯಂತ ಅವರ ಆರಾಧನೆಯನ್ನು ಇಂದಿಗೂ ಆಚರಿಸುತ್ತಿದ್ದಾರೆ.

### 2. ಕನಕದಾಸರು (ಕ್ರಿ. ಶ. 1486 - 1580)

ವ್ಯಾಸರಾಯರ ಶಿಷ್ಯರಾಗಿ, ಪುರಂದರದಾಸರ ಸಮಕಾಲೀನರಾಗಿದ್ದವರು ಶ್ರೀ ಕನಕದಾಸರು, ಆಧ್ಯಾತ್ಮಿಕ ತತ್ವಗಳನ್ನು ಆಡುಭಾಷೆಯಲ್ಲಿ ಒಗಟುಗಳ ರೂಪದಲ್ಲಿ ಸಾಮಾನ್ಯ ಜನರಿಗೆ ನೀಡಿದವರು. ಭಗವಂತನ ಧ್ಯಾನವನ್ನು ಎಲ್ಲರೂ ಮಾಡಿ, ದೈವವನ್ನು ಒಲಿಸಿಕೊಳ್ಳಬಹುದೆಂಬ ವಿಷಯವನ್ನು ಮಾಡಿ ತೋರಿಸಿದರು, ಹಾಡಿ ಕೇಳಿಸಿದರು. ಹೀಗೆ ಸಮಾಜ ಸುಧಾರಕರಾಗಿ, ಮೇಲು ಕೀಳೆಂಬ ಭಾವವನ್ನು ಮೆಟ್ಟಿ, ಭಾವೈಕ್ಯತೆಯನ್ನು ಐನೂರು ವರುಷಗಳ ಹಿಂದೆಯೇ ಸಾಧಿಸಿದವರು ಕನಕದಾಸರು.

ಕನಕದಾಸರು ಬೀರೇಗೌಡ ಮತ್ತು ಬಚ್ಚಮ್ಮನೆಂಬ ದಂಪತಿಗಳಿಗೆ ಜನಿಸಿದರು. ಇವರ ಸ್ಥಳ ಧಾರವಾಡ ಜಿಲ್ಲೆಯ '**ಬಾಡ**' ವೆಂಬ ಗ್ರಾಮ. ಕುರುಬರ ಪಂಗಡಕ್ಕೆ ಸೇರಿದವರು. ಇವರು ತಿರುಪತಿಯ ತಿಮ್ಮಪ್ಪನ ಒಕ್ಕಲಿನವರಾದ್ದರಿಂದ ತಿಮ್ಮಪ್ಪನೆಂದೇ ಹೆಸರಿಟ್ಟರು. ತಂದೆಯಂತೆಯೇ ಆ ಗ್ರಾಮದ ನಾಯಕರಾದರು ಒಮ್ಮೆ ಕಾಗಿನೆಲೆಯಲ್ಲಿದ್ದಾಗ ಇವರಿಗೆ ಅಪಾರವಾಗಿ ಚಿನ್ನದ ನಾಣ್ಯಗಳು ದೊರಕಿದವು. ಆ ಹಣವನ್ನು ಆ ಗ್ರಾಮದ ಕೇಶವನ ದೇವಾಲಯದ ಜೀರ್ಣೋದ್ಧಾರಕ್ಕೆ ವಿನಿಯೋಗಿಸಿದರು. ಹೀಗೆ ದ್ರವ್ಯವು ದೊರಕಿದ್ದರಿಂದ ತಿಮ್ಮಪ್ಪನನ್ನು ಕನಕನೆಂದು ಕರೆದರು. ಈತನೇ ಕನಕನಾಯಕನಾಗಿ ಮುಂದೆ ಕನಕದಾಸರಾದರು. ವ್ಯಾಸರಾಯ ಸ್ವಾಮಿಗಳಿಂದ ದೀಕ್ಷೆಯನ್ನು ಪಡೆದರು.

ವಾಗ್ಗೇಯಕಾರರಾಗಿ ಆದಿ ಕೇಶವ, ಬಾಡದಾದಿ ಕೇಶವ, ಕಾಗಿನೆಲೆಯಾದಿ ಕೇಶವನೆಂಬ ಅಂಕಿತದೊಡನೆ ಅನೇಕ ಕೀರ್ತನೆಗಳನ್ನು ಕನ್ನಡದಲ್ಲಿ ರಚಿಸಿದ್ದಾರೆ. ಮುಂಡಿಗೆಗಳನ್ನು ರಚಿಸಿದ್ದಾರೆ. ಮುಂಡಿಗೆಗಳು ದ್ವಂದಾರ್ಥವನ್ನುಳ್ಳ ಕನ್ನಡ ಕೀರ್ತನೆಗಳು. ಉತ್ತಮ ಕಾವ್ಯಗಳನ್ನು ರಚಿಸಿದ್ದಾರೆ. ಹರಿಭಕ್ತಿಸಾರ, ಮೋಹನ ತರಂಗಿಣಿ, ರಾಮಧಾನ್ಯಚರಿತೆ ನಳಚರಿತ್ರೆ, ಮುಂತಾದ ಕಾವ್ಯಗಳನ್ನು ಷಟ್ಪದಿಯಲ್ಲಿ ರಚಿಸಿದ್ದಾರೆ.

ಸಮಾಜೋದ್ಧಾರಕರಾಗಿ ಜನ ಸಾಮಾನ್ಯರಲ್ಲಿ ಸೌಹಾರ್ದವನ್ನು ಬೆಳೆಸಿ, ಸಮಾನತೆಯನ್ನು ಹೊಂದಲು ಶ್ರಮಿಸಿದ್ದಾರೆ. ತಮ್ಮ ಕೀರ್ತನೆಗಳ ಮೂಲಕ ತತ್ವ ಪ್ರಚಾರ ಮಾಡಿ, ಎಲ್ಲರನ್ನೂ ಭಗವದ್ಭಕ್ತರಾಗುವಂತೆ ಮಾಡಿ, ಲೋಕಕಲ್ಯಾಣವೆಸಗಿದ್ದಾರೆ. ಇವರ ಕೀರ್ತನೆಗಳು ಇಂದಿಗೂ ಜನಮನದಲ್ಲಿ ಮೊಳಗುತ್ತಿವೆ.

## ಕೃತಿರಚನಾಕಾರರು

### 1. ಶ್ಯಾಮಶಾಸ್ತ್ರಿಗಳು (ಕ್ರಿ.ಶ. 1762 - 1827)

ಸಂಗೀತ ತ್ರಿಮೂರ್ತಿಗಳಲ್ಲಿ ಹಿರಿಯವರಾದ ಶ್ಯಾಮಶಾಸ್ತ್ರಿಗಳು ಕಾಮಾಕ್ಷಿದೇವಿಯ ಉಪಾಸನೆಯನ್ನು ಮಾಡಿ ದೇವಿಯನ್ನು ಒಲಿಸಿಕೊಂಡು, ಅವಳೊಡನೆ ಮಾತಾನಾಡಿದ್ದರು. ಬಂಗಾರು ಕಾಮಾಕ್ಷಿಯನ್ನು ಎಡೆಬಿಡದೆ ಆರಾಧಿಸಿದ್ದಾರೆ. ಅವಳನ್ನು ತಮ್ಮ ಕೃತಿಗಳ ಮೂಲಕ ನಾನಾ ವಿಧದಲ್ಲಿ ಬೇಡಿದ್ದಾರೆ. ಅದರಲ್ಲೂ ದೇವಿಯನ್ನು ತಾಯಿಯೆಂದೇ ಸಂಭೋದಿಸಿ ಆನಂದಪಟ್ಟಿದ್ದಾರೆ.

ಶ್ಯಾಮಶಾಸ್ತ್ರಿಗಳು ತಿರುವಾರೂರಿನಲ್ಲಿ ಜನಿಸಿದರು. ತಂದೆ ವಿಶ್ವನಾಥ ಅಯ್ಯರ್. ವೆಂಕಟಸುಬ್ರಹ್ಮಣ್ಯನೆಂದು ಮಗುವಿಗೆ ನಾಮಕರಣ ಮಾಡಿದರು. ಮುದ್ದಿನಿಂದ ಶ್ಯಾಮಕೃಷ್ಣನೆಂದು ಮಗುವನ್ನು ಕರೆಯುತ್ತಿದ್ದರು. ಮುಂದೆ ಶ್ಯಾಮಶಾಸ್ತ್ರಿಗಳೆಂಬ ಹೆಸರೇ ಜನಜನಿತವಾಗಿ ಉಳಿದುಕೊಂಡಿತು. ಶ್ಯಾಮಶಾಸ್ತ್ರೀಗಳು ವೇದಾಧ್ಯಯನ, ವ್ಯಾಕರಣ, ಛಂದಸ್ಸು,ಸಾಹಿತ್ಯ ಮುಂತಾದ ಶಾಸ್ತ್ರಗಳಲ್ಲಿ ಪಾರಂಗತರಾದರು. ಸಂಗೀತವನ್ನು ತಮ್ಮ ಸೋದರ ಮಾವನಿಂದ ಕಲಿತರು.

ಯೋಗಿಗಳಾದ ಸಂಗೀತ ಸ್ವಾಮಿಗಳು ಆಗಿಂದಾಗ್ಗೆ ವಿಶ್ವನಾಥಯ್ಯನವರನ್ನು ಭೇಟಿ ಮಾಡಲು ಬರುತ್ತಿದ್ದರು. ವರ್ಚಸ್ವಿಯಾದ ಬಾಲಕನನ್ನು ನೋಡಿ ಸಂತೋಷಿಸಿ, ಸಂಗೀತದಲ್ಲಿ ಉನ್ನತ ಶಿಕ್ಷಣವನ್ನು ನೀಡಲು ಒಪ್ಪಿಗೆಯನ್ನಿತ್ತರು. ಇದಲ್ಲದೇ ಶ್ರೀವಿದ್ಯಾಮಂತ್ರವನ್ನೂ ಬಾಲಕನಿಗೆ ಉಪದೇಶಿಸಿದರು. ಗುರುಗಳ ಆಶ್ರಯದಲ್ಲಿ ಶ್ಯಾಮಶಾಸ್ತ್ರಿಗಳು ಸಂಗೀತದಲ್ಲಿ ವಿಶೇಷ ಪರಿಣತಿಯನ್ನು ಹೊಂದಿ, ರಾಗಾಲಾಪನೆ, ರಾಗ, ತಾನ ಪಲ್ಲವಿಗಳಲ್ಲಿ ಪ್ರಾವೀಣ್ಯತೆಯನ್ನು ಪಡೆದರು. ಸಂಗೀತದಲ್ಲಿ ಹಿರಿಯ ವಾಗ್ಗೇಯಕಾರರೆನಿಸಿ, '**ಶ್ಯಾಮಕೃಷ್ಣ**' ನೆಂಬ ಅಂಕಿತದಲ್ಲಿ ಅನೇಕ ಸ್ವರಜತಿ, ವರ್ಣ, ಕೃತಿಗಳನ್ನು ರಚಿಸಿದರು. ಇವರ ಕೃತಿಗಳು ಹೆಚ್ಚಾಗಿ ತೆಲುಗು ಭಾಷೆಯಲ್ಲಿದ್ದರೂ ಸಂಸ್ಕೃತ ಮತ್ತು ತಮಿಳಿನಲ್ಲೂ ಕೆಲವು ಕೃತಿಗಳು ರಚಿತವಾಗಿವೆ. ತಾಳದಲ್ಲಿ ವಿಶೇಷ ಪರಿಣತಿಯನ್ನು ಹೊಂದಿ ನೂರೆಂಟು ತಾಳಗಳನ್ನು ಅಭ್ಯಸಿಸಿದ್ದರು. ಅಲ್ಲದೆ ಶರಭನಂದನ ತಾಳವನ್ನೂ ಕಲ್ಪಿಸಿದ್ದಾರೆ. ಛಾಪುತಾಳದಲ್ಲಿ ಅನುಲೋಮ ಮತ್ತು ವಿಲೋಮ ಕ್ರಮಗಳನ್ನು ಅಳವಡಿಸಿರುವವರಲ್ಲಿ ಆದ್ಯರು. ಸ್ವರಜತಿಗಳು, ಸಭಾಗಾನದ ರಚನೆಯ ಗುಣಗಳನ್ನು ಒಳಗೊಂಡು, ಸಂಗೀತ

ಕಛೇರಿಯಲ್ಲಿ ಇಂದಿಗೂ ನಿರೂಪಿತವಾಗುತ್ತಿವೆ, ಕೆಲವು ಹೊಸರಾಗಗಳನ್ನೂ ರೂಪಿಸಿದ್ದಾರೆ; ಅವುಗಳಲ್ಲಿ ಚಿಂತಾಮಣಿ, ಕಲ್ಗಡ ಮುಖ್ಯವಾದವು. ಇವರ ರಚನೆಗಳು ರಾಗಭಾವ ಪೂರ್ಣವಾಗಿದ್ದು ಭಕ್ತಿಯಿಂದ ಕೂಡಿವೆ. ಸಾಹಿತ್ಯವು ದೇವಿಯೊಡನೆ ಸಂಭಾಷಿಸುವಂತೆ ಸರಳವಾಗಿ ನಿರೂಪಿತವಾಗಿವೆ. ಕೆಲವು ಕೃತಿಗಳಲ್ಲಿ ಸ್ವರಸಾಹಿತ್ಯಗಳು, ಚಿಟ್ಟೆಸ್ವರಗಳು ಕಂಡುಬರುತ್ತವೆ.

## 2. ಶ್ರೀ ತ್ಯಾಗರಾಜರು (ಕ್ರಿ.ಶ. 1767 - 1847)

ಕರ್ನಾಟಕ ಸಂಗೀತ ಚರಿತ್ರೆಯಲ್ಲಿ ವಾಗ್ಗೇಯಕಾರ ಸಾರ್ವಭೌಮರೆನಿಸಿಕೊಂಡ ತ್ಯಾಗರಾಜರು ಸಂಗೀತ ತ್ರಿಮೂರ್ತಿಗಳಲ್ಲಿ ಒಬ್ಬರು.

ತಿರುವಾರೂರಿನಲ್ಲಿ ರಾಮಬ್ರಹ್ಮ ಮತ್ತು ಸೀತಮ್ಮ ದಂಪತಿಗಳಿಗೆ ವರಪುತ್ರರಾಗಿ ಜನಿಸಿದರು. ಬಾಲ್ಯದಲ್ಲಿಯೇ ಸಂಗೀತ, ಸಾಹಿತ್ಯ, ವೇದ, ಪುರಾಣ, ಉಪನಿಷತ್ತು, ಅಲಂಕಾರ ಶಾಸ್ತ್ರಗಳ ಅಧ್ಯಯನ ಮಾಡಿದ್ದರು. ತಮ್ಮ ಐದನೆಯ ವಯಸ್ಸಿನಲ್ಲೇ ವಾಲ್ಮೀಕಿ ರಾಮಾಯಣದ ಇಪ್ಪತ್ತನಾಲ್ಕು ಸಾವಿರ ಶ್ಲೋಕಗಳನ್ನು ಕಂಠಪಾಠ ಮಾಡಿ ಶ್ರೀ ತ್ಯಾಗರಾಜರು ಸುಮಧುರವಾಗಿ ಹಾಡುತ್ತಿದ್ದರು. ತಂದೆ ರಾಮಬ್ರಹ್ಮರ ರಾಮಾಯಣದ ವ್ಯಾಖ್ಯಾನಕ್ಕೆ ಶ್ಲೋಕಗಳನ್ನು ಹಾಡುತ್ತಿದ್ದರು. ಸೊಂಠಿ ವೆಂಕಟರಮಣ ಭಾಗವತರ ಶಿಷ್ಯರಾಗಿ, ತಮ್ಮ ಎಂಟನೆಯ ವಯಸ್ಸಿನಲ್ಲಿ ಶಿಷ್ಯವೃತ್ತಿಯನ್ನು ಆರಂಭಿಸಿ, ಎರಡು ವರ್ಷಗಳ ಕಾಲದಲ್ಲೇ ಸಂಗೀತದಲ್ಲಿ ಪಾರಂಗತರಾದರು. ಗುರುವು ಹೆಮ್ಮೆಯಿಂದ 'ದೊರಕುನಾ ಇಟುವಂಟಿ ಶಿಷ್ಯುಡು' ಇಂತಹ ಶಿಷ್ಯನು ದೊರಕುವನೇ ಎಂದು ಸಭಿಕರ ಮುಂದೆ ತ್ಯಾಗರಾಜನನ್ನು ಹೊಗಳಿದರು. ಮುಂದೆ ರಾಮಕೃಷ್ಣಾನಂದಯತಿಗಳಿಂದ ತಾರಕನಾಮ ಉಪದೇಶವಾಯಿತು. ಶ್ರೀ ರಾಮಚಂದ್ರನೇ ಅವರ ಸರ್ವಸ್ವವಾದನು. ತೊಂಬತ್ತಾರು ಕೋಟಿ ರಾಮನಾಮ ಮಂತ್ರವನ್ನು ಜಪಿಸಿ ಶ್ರೀರಾಮನ ಅನನ್ಯ ಭಕ್ತರಾಗಿ, ಆತನ ದರ್ಶನವನ್ನು ಅನೇಕ ಬಾರಿ ಪಡೆದವರು. ಶ್ರೀ ತ್ಯಾಗರಾಜರ ಪರಂಪರೆಯಲ್ಲೇ ಕರ್ನಾಟಕ ಸಂಗೀತವು ಸಮೃದ್ಧವಾಗಿ ಬೆಳೆದು, ಜನಮನವನ್ನು ಸೂರೆಗೊಂಡಿದೆ. ಅವರ ಕೃತಿಗಳು ಭಕ್ತಿ ಪ್ರಧಾನವಾಗಿ ತತ್ವಗಳು, ನೀತಿಗಳು, ಪುರಾಣಗಳ ಸತ್ವವನ್ನು ಒಳಗೊಂಡಿವೆ. ಮೊಟ್ಟಮೊದಲಿಗೆ ಕೃತಿಗಳಲ್ಲಿ ಸಂಗತಿಗಳನ್ನು ಅಳವಡಿಸಿದವರು ತ್ಯಾಗರಾಜರು ತಾವು ಸಂದರ್ಶಿಸಿದ ಕ್ಷೇತ್ರಗಳ ಅಧಿದೇವತೆಗಳನ್ನು ಸರಳಸುಂದರ ಕೃತಿಗಳ ಮೂಲಕ ಸ್ತುತಿಸಿರುವುದು ಲಾಲ್ಗುಡಿ ಪಂಚರತ್ನ, ತಿರುವೊಟ್ರಿಯೂರು ಪಂಚರತ್ನ, ಕೋವೂರು ಪಂಚರತ್ನಗಳೆಂದು ಪ್ರಸಿದ್ಧಿಪಡೆದಿವೆ. ಅವರು ರಚಿಸಿರುವ ಘನರಾಗ ಪಂಚರತ್ನಗಳಂತೂ ಸಂಗೀತ ಕ್ಷೇತ್ರಕ್ಕೆ ಒಂದು ವಿಶಿಷ್ಟ ಕೊಡುಗೆಯಾಗಿದೆ. ಪ್ರಹ್ಲಾದ ಭಕ್ತಿವಿಜಯ, ಸೀತಾರಾಮ ವಿಜಯ ಮತ್ತು ನೌಕಾಚರಿತ್ರೆಯೆಂಬ ಮೂರು ಯಕ್ಷಗಾನಶೈಲಿಯ ಗೇಯನಾಟಕಗಳನ್ನು ರಚಿಸಿದ್ದಾರೆ.

ಶಾಂತಮ್ಮ ಎಂಬ ಕನ್ಯೆಯೊಡನೆ ವಿವಾಹವಾಗಿ ಸೀತಾಲಕ್ಷ್ಮಿ ಎಂಬ ಹೆಣ್ಣು ಮಗುವನ್ನು ಪಡೆದಿದ್ದರು. ಅನೇಕ ಶಿಷ್ಯರಿಗೆ ತರಬೇತಿಯನ್ನು ನೀಡಿ ತಮ್ಮ ಸಂಗೀತ ರಚನೆಗಳು ಪರಂಪರಾಗತವಾಗಿ ಉಳಿಯುವಂತೆ ಮಾಡಿದರು. ತಮ್ಮ ಎಂಬತ್ತನೆಯ ವಯಸ್ಸಿನಲ್ಲಿ ಪುಷ್ಯ ಬಹುಳ ಪಂಚಮಿಯಂದು ಶ್ರೀರಾಮನ ಪಾದಾರವಿಂದವನ್ನು ಸೇರಿ ನಾದ

ಬ್ರಹ್ಮಾನಂದರಾಗಿ, ನಾದ ಯೋಗಿಗಳೆನಿಸಿದರು. ಇಂದಿಗೂ ತ್ಯಾಗರಾಜರ ಆರಾಧನೆಯನ್ನು ತಿರುವಯ್ಯಾರಿನಲ್ಲಿ ವಿಜೃಂಭಣೆಯಿಂದ ಆಚರಿಸಲಾಗುತ್ತಿದೆ. ದೇಶದ ಮೂಲೆ ಮೂಲೆಗಳಲ್ಲೂ ತ್ಯಾಗರಾಜರ ಆರಾಧನೆಯನ್ನು ನಡೆಸುವುದು ವಾಡಿಕೆಯಾಗಿದೆ.

### 3. ಶ್ರೀ ಮುತ್ತುಸ್ವಾಮಿ ದೀಕ್ಷಿತರು (ಕ್ರಿ.ಶ. 1775 - 1835)

ತಿರುವಾರೂರಿನಲ್ಲೇ ಜನಿಸಿದ ಶ್ರೀ ಮುತ್ತುಸ್ವಾಮಿ ದೀಕ್ಷಿತರು ಸಂಗೀತ ತ್ರಿಮೂರ್ತಿಗಳಲ್ಲಿ ಕಿರಿಯರು. ಸಂಗೀತ ವಿದ್ವಾಂಸರಾದ, ವಾಗ್ಗೇಯಕಾರರಾದ ರಾಮಸ್ವಾಮಿ ದೀಕ್ಷಿತರ ಹಾಗೂ ಭಾಗೀರಥಮ್ಮನವರ ಪುತ್ರರಾಗಿ ಜನಿಸಿದರು. ತಂದೆಯಿಂದಲೇ ಸಂಗೀತವನ್ನು ಕಲಿತರು. ವೈಣಿಕರಾಗಿ, ಗಾಯಕರಾಗಿ, ಸಂಸ್ಕೃತ, ತಂತ್ರಶಾಸ್ತ್ರ, ಮಂತ್ರಶಾಸ್ತ್ರ, ಜ್ಯೋತಿಶ್ಯಾಸ್ತ್ರ, ಅಲಂಕಾರ ಶಾಸ್ತ್ರಗಳಲ್ಲಿ ನಿಷ್ಣಾತರಾಗಿದ್ದರು. ಚಿದಂಬರನಾಥ ಯೋಗಿಗಳಿಂದ ಶ್ರೀವಿದ್ಯಾಮಂತ್ರೋಪದೇಶವನ್ನು ಪಡೆದರು. ಗುರುಗಳೊಡನೆ ಕಾಶಿಗೆ ತೆರಳಿ ಅಲ್ಲಿ ಐದು ವರ್ಷಗಳ ಕಾಲ ಮಂತ್ರ ಜಪವನ್ನು ನಡೆಸಿದರು. ಗಂಗಾನದಿಯಲ್ಲಿ ನಿಂತು ಜಪವನ್ನು ಮಾಡಿ ಮುಗಿಸಿದಾಗ ಅವರ ಕೈಗೆ ವೀಣೆಯು ತಾನೇತಾನಾಗಿ ಬಂದಿತು. ಕಾಶಿಯಲ್ಲಿದ್ದಾಗ ದೀಕ್ಷಿತರು ಕರ್ನಾಟಕ ಸಂಗೀತದೊಡನೆ ಹಿಂದೂಸ್ಥಾನಿ ಸಂಗೀತವನ್ನೂ ಅಭ್ಯಸಿಸಿದರು. ಚಿಕ್ಕಂದಿನಲ್ಲೇ ಇವರಿಗೆ ಪಾಶ್ಚಾತ್ಯ ಸಂಗೀತದ ಪರಿಚಯವಾಯಿತು. ತಂದೆಗೆ ಆಪ್ತಮಿತ್ರರಾದ ಚರ್ಚಿನ ಪಾದರಿಗಳ ಸಹವಾಸದಲ್ಲಿ ಪಾಶ್ಚಾತ್ಯ ಸಂಗೀತದ ರೂಢಮೂಲಗಳನ್ನು ಅರಿತುಕೊಂಡರು. ಹೀಗೆ ಮೂರು ಮುಖ್ಯವಾದ ಶಾಸ್ತ್ರೀಯ ಸಂಗೀತ ಪದ್ಧತಿಗಳ ಪರಿಚಯವಾಯಿತು.

ಕಾಶಿಯಿಂದ ತಿರುವಾರೂರಿಗೆ ಹಿಂದಿರುಗುವಾಗ ತಿರುತ್ತಣಿಯಲ್ಲಿ ಸುಬ್ರಹ್ಮಣ್ಯ ದೇವರು ಪ್ರತ್ಯಕ್ಷರಾಗಿ, ವಾಗ್ಗೇಯಕಾರನಾಗುವ ಶಕ್ತಿಯನ್ನು ಅನುಗ್ರಹಿಸಿದರು. ತಮ್ಮ ಹದಿನಾರನೆಯ ವಯಸ್ಸಿನಲ್ಲಿ **'ಗುರುಗುಹ' ಎಂಬ ಅಂಕಿತದೊಡನೆ** ಕೃತಿ ರಚನೆಯನ್ನು ಪ್ರಾರಂಭಿಸಿದರು. ಇವರ ಮೊದಲ ಕೃತಿ 'ಶ್ರೀನಾಥಾದಿ' ಮಾಯಾಮಾಳವಗೌಳ ರಾಗದಲ್ಲಿ ಆದಿತಾಳದಲ್ಲಿ ರಚಿತವಾಗಿದೆ. ಪಲ್ಲವಿಯಲ್ಲಿಯೇ ಮೂರು ಕಾಲಗಳನ್ನು ಹೊಂದಿಸಿ ಮಾಡಿರುವ ವಿಶಿಷ್ಟ ಕೃತಿ ಇದು. ಕೆಲವು ಕೃತಿಗಳನ್ನು ಸಮಷ್ಟಿಚರಣದೊಡನೆ ರಚಿಸಿದ್ದಾರೆ. ಮಧ್ಯಮಕಾಲ ಸಾಹಿತ್ಯವನ್ನು ಕೃತಿಗಳಿಗೆ ಅಳವಡಿಸಿದ್ದಾರೆ.

ಪಿಟೀಲು ವಾದ್ಯವನ್ನು ಕರ್ನಾಟಕ ಸಂಗೀತಕ್ಕೆ ತಂದ ಕೀರ್ತಿ ದೀಕ್ಷಿತರದು. ನಾಗಸ್ವರ ವಾದನ ಕ್ರಮವನ್ನು ರೂಪಿಸಿದವರೇ ದೀಕ್ಷಿತರು. ವಾಗ್ಗೇಯಕಾರರಾಗಿ, ವರ್ಣ, ಕೃತಿ, ಕೀರ್ತನೆ, ರಾಗಮಾಲಿಕೆಗಳನ್ನು ಸಂಸ್ಕೃತದಲ್ಲಿ ರಚಿಸಿದ್ದಾರೆ. ಅನೇಕ ಆರ್ಷೇಯವಾದ ರಾಗಗಳನ್ನು ತಮ್ಮ ಕೃತಿಗಳ ಮೂಲಕ ಜೀವಂತಗೊಳಿಸಿದ್ದಾರೆ. ಎಪ್ಪತ್ತೆರಡು ಮೇಳಗಳಲ್ಲಿ ಕೃತಿಗಳನ್ನು ರಚಿಸಿ, ಮೇಳಗಳಿಗೆ ರಾಗ ಸ್ವರೂಪವನ್ನು ನೀಡಿದ್ದಾರೆ. ಸಮುದಾಯ ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ನವಗ್ರಹ ಕೃತಿಗಳು, ಪಂಚಲಿಂಗ ಸ್ಥಳ ಕೃತಿಗಳು, ನವಾವರಣ ಕೃತಿಗಳು ಮುಖ್ಯವಾದವು, ಪಾಶ್ಚಾತ್ಯ ಸಂಗೀತ ಮಟ್ಟುಗಳಿಗೆ ಸಾಹಿತ್ಯವನ್ನು ರಚಿಸಿದ್ದಾರೆ. ದೀಕ್ಷಿತರು ತಮ್ಮ ರಚನೆಗಳಲ್ಲಿ ಸೂಳಾದಿ ಸಪ್ತತಾಳಗಳನ್ನು ಮಾತ್ರ

ಬಳಸಿದ್ದಾರೆ. ಛಾಪುತಾಳಗಳಲ್ಲಿ ಅವರು ರಚನೆಗಳನ್ನು ರಚಿಸಿಲ್ಲ. ಉತ್ತಮ ಶಿಷ್ಯರನ್ನು ಪಡೆದಿದ್ದರು. ಅವರ ದೌಹಿತ್ರರು ಮತ್ತು ದತ್ತು ಪುತ್ರರು ಆಗಿದ್ದ ಸುಬ್ಬರಾಮದೀಕ್ಷಿತರು ಅವರ ರಚನೆಗಳನ್ನು ಸ್ವರ ಲಿಪಿಯ ಮೂಲಕ ಬರೆದಿಟ್ಟು, ಮುಂದಿನ ಪೀಳಿಗೆಗೆ ಶುದ್ಧವಾದ ಸಂಪ್ರದಾಯಬದ್ಧವಾದ ಸಂಗೀತವನ್ನು ಉಳಿಸಿದ್ದಾರೆ.

4. ಮುತ್ತಯ್ಯ ಭಾಗವತರು (ಕ್ರಿ.ಶ. 1877 - 1945)

ಇಪ್ಪತ್ತನೆಯ ಶತಮಾನದಲ್ಲಿದ್ದು ಕರ್ನಾಟಕ ಸಂಗೀತಕ್ಕಾಗಿ ಶ್ರಮಿಸಿದ ವಾಗ್ಗೇಯಕಾರರಲ್ಲಿ ಮುತ್ತಯ್ಯ ಭಾಗವತರು ಒಬ್ಬರು. ಸಂಗೀತದಲ್ಲಿ ಡಾಕ್ಟರೇಟ್ ಪದವಿಯನ್ನು ಪಡೆದ ಹಿರಿಮೆ ಇವರದು. ಸಂಗೀತ ಮಹಾವಿದ್ಯಾಲಯಗಳನ್ನು ಮದ್ರಾಸ್, ತಿರುವಾಂಕೂರುಗಳಲ್ಲಿ ಸ್ಥಾಪಿಸಿ, ಆ ಸಂಸ್ಥೆಗಳ ಪ್ರಾಂಶುಪಾಲರಾಗಿ ಸೇವೆ ಸಲ್ಲಿಸಿದ ಹೆಗ್ಗಳಿಕೆ ಮುತ್ತಯ್ಯ ಭಾಗವತರದ್ದು. ಸ್ವಾತಿ ತಿರುನಾಳರ ಅನೇಕ ಕೃತಿಗಳಿಗೆ ಶುದ್ಧ ಸಂಪ್ರದಾಯದಿಂದ ಕೂಡಿದ ಧಾತು ಅಥವಾ ವರ್ಣಮಟ್ಟುಗಳನ್ನು ಸಂಯೋಜಿಸಿ, ಆ ಕೃತಿಗಳು ಜನಜನಿತವಾಗುವಂತೆ ಮಾಡಿದರು. ಮೈಸೂರು ಸಂಸ್ಥಾನದಲ್ಲಿ ಆಸ್ಥಾನ ವಿದ್ವಾಂಸರಾಗಿದ್ದಾಗ, ಅದೇ ಸಂಸ್ಥಾನದಲ್ಲಿ ಕನ್ನಡ ಹಾಗೂ ಸಂಸ್ಕೃತದಲ್ಲಿ ಪಂಡಿತರಾಗಿದ್ದ ದೇವೋತ್ತಮ ಜೋಯಿಸರು ಕನ್ನಡದಲ್ಲಿ ರಚಿಸಿದ ನೂರೆಂಟು ಕೃತಿಗಳಿಗೆ ವರ್ಣಮಟ್ಟು ಹಾಕಿ ಶ್ರೀಮನ್ಮಹಾರಾಜರ ಮೆಚ್ಚುಗೆಗೆ ಪಾತ್ರರಾದರು. ಹೀಗೆ ಎಲ್ಲ ಸಂಸ್ಥಾನಗಳ ರಾಜ ಮಹಾರಾಜರುಗಳಿಂದ ಸನ್ಮಾನಿತರಾದವರು. ಸಂಗೀತ ಸಮ್ಮೇಳನಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಕಥಾಕಾಲಕ್ಷೇಪಗಳನ್ನು ದೇಶಗಳ ಮೂಲೆ ಮೂಲೆಗಳಲ್ಲಿ ಮಾಡಿ ಅಪಾರ ಕೀರ್ತಿಯನ್ನು ಸಂಪಾದಿಸಿದರು.

ಇಷ್ಟು ಪಾಂಡಿತ್ಯವುಳ್ಳ ಭಾಗವತರು ಜನಿಸಿದ್ದು ತಿರುನೆಲ್‌ವೇಲಿಗೆ ಸೇರುವ ಹರಿಕೇಶ ನೆಲ್ಲೂರು ಎಂಬ ಗ್ರಾಮದಲ್ಲಿ. ಇವರ ತಂದೆ ಲಿಂಗಮಯ್ಯರ್, ಬಾಲ್ಯದಲ್ಲೇ ಸಂಸ್ಕೃತ ಮತ್ತು ಸಾಹಿತ್ಯಗಳ ಅಧ್ಯಯನವನ್ನು ನಡೆಸಿದ್ದರು. ಸಂಗೀತ ವಿದ್ವಾನ್ ಸಾಂಬಶಿವಯ್ಯನವರಲ್ಲಿ ಸಂಗೀತ ಶಿಕ್ಷಣವನ್ನು ಪಡೆದರು. ಕರ್ನಾಟಕ ಸಂಗೀತದಲ್ಲಿ ವಿವಿಧ ಪರೀಕ್ಷೆಗಳನ್ನು ನಡೆಸಲು, ಪಠ್ಯವಸ್ತುವನ್ನು ತಯಾರಿಸಲು ಕಾರಣಕರ್ತರಾದರು, ಪರೀಕ್ಷಾ ಮಂಡಲಿಯ ಸದಸ್ಯರಾಗಿಯೂ ದುಡಿದರು.

ಭಾಗವತರು ವಾಗ್ಗೇಯಕಾರರಾಗಿ ಕನ್ನಡ, ಸಂಸ್ಕೃತ, ತಮಿಳು, ತೆಲುಗು, ಭಾಷೆಗಳಲ್ಲಿ ಸಂಗೀತ ರಚನೆಗಳನ್ನು ರಚಿಸಿದ್ದಾರೆ. ಅನೇಕ ಹೊಸ ರಾಗಗಳನ್ನು ರೂಪಿಸಿರುವರಲ್ಲದೇ, ಅನೇಕ ಅಪರೂಪ ರಾಗಗಳಲ್ಲಿ ಕೃತಿಗಳನ್ನು ರಚಿಸಿದ್ದಾರೆ. ತಾನವರ್ಣ, ದರುವರ್ಣ, ಕೃತಿ, ಪದ, ನೋಟ್ಟುಸ್ವರ, ತಿಲ್ಲಾನಗಳನ್ನು '**ಹರಿಕೇಶ**' ಅಂಕಿತದೊಡನೆ ರಚಿಸಿದ್ದಾರೆ.

ಪ್ರತಿಷ್ಠಿತ ಸಂಸ್ಥೆಗಳಿಂದಲೂ ರಾಜರುಗಳಿಂದಲೂ ಸನ್ಮಾನಿತರಾಗಿ ಅನೇಕ ಖಿಲ್ಲತ್ತುಗಳನ್ನು ಸಂಪಾದಿಸಿದ್ದಾರೆ. ಗಾಯಕ ಶಿಖಾಮಣಿ, ಸಂಗೀತ ಕಲಾನಿಧಿ ಎಂಬ ಬಿರುದುಗಳು ಅವರಿಗೆ ಸಂದಿವೆ. '**ಸಂಗೀತ ಕಲ್ಪದ್ರುಮ**' ಎಂಬ ಸಂಗೀತದ ಲಕ್ಷ್ಯ,ಲಕ್ಷಣ ಗ್ರಂಥವನ್ನು ಮಲೆಯಾಳ ಭಾಷೆಯಲ್ಲಿ ಬರೆದಿದ್ದಾರೆ. ಸಂಸ್ಕೃತದಲ್ಲಿ ತ್ಯಾಗರಾಜ ಕಾವ್ಯವನ್ನು ರಚಿಸಿದ್ದಾರೆ. ಬೆಳಕವಾಡಿ ವರದರಾಜಯ್ಯಂಗಾರ್, ವೈದ್ಯಲಿಂಗಂರವರು ಅವರ ಶಿಷ್ಯರಲ್ಲಿ ಮುಖ್ಯರಾದವರು.

## ವಚನಕಾರರು

### 1. ಅಕ್ಕಮಹಾದೇವಿ (ಕ್ರಿ.ಶ. 1130 - 1160)

ಸಮಾಜಸುಧಾರಣೆಯಲ್ಲಿ ಮಹಿಳೆಯ ಪಾತ್ರವು ಹಿರಿದಾದುದು. ಪುರುಷಪ್ರಧಾನವಾದ ಸಮಾಜದಲ್ಲಿ ಮಹಿಳೆಯರು ಪುರುಷರಿಗೆ ಸಮಾನರಾಗಿ ನಿಲ್ಲಬಲ್ಲರೆಂಬ ಪ್ರಜ್ಞೆಯನ್ನು ಸುಮಾರು ಎಂಟನೂರು ವರುಷಗಳ ಹಿಂದೆಯೇ ಮೂಡಿಸಿದ ಕರ್ನಾಟಕ ಪ್ರಪ್ರಥಮ ಮಹಿಳೆಯೆಂದರೆ ಅಕ್ಕಮಹಾದೇವಿ. ಹನ್ನೆರಡನೆಯ ಶತಮಾನದಲ್ಲೇ ಇಂತಹ ಮಹಿಳಾ ಜಾಗೃತಿಯನ್ನು ಮೂಡಿಸಿದರು. ಸಂಸಾರವನ್ನು ತ್ಯಜಿಸಿ, ಚೆನ್ನಮಲ್ಲಿಕಾರ್ಜುನ ದೇವರೇ ತನ್ನ ಪತಿಯೆಂಬುದಾಗಿ ನಂಬಿದರು. ತಮ್ಮ ವೈರಾಗ್ಯದ ಮೂಲಕವೇ ಪುರಷರೊಡನೆ ಹೋರಾಡಿ ಸಮಾಜೋದ್ಧಾರ ಕಾರ್ಯದಲ್ಲಿ ನೆರವಾದವರು ಈ ಶಿವಶರಣೆ. ತಮ್ಮ ಭಾವನೆಗಳನ್ನು ವಚನಗಳ ಮೂಲಕ ತಿಳಿಗನ್ನಡದಲ್ಲಿ ತಿಳಿಸಿದರು. ಲಿಂಗಭೇದವಿಲ್ಲದೆ, ಜಾತಿಭೇದವಿಲ್ಲದೆ ಪ್ರತಿಯೊಬ್ಬರೂ ಲೋಕವಿಚಾರಗಳನ್ನು ಅರಿಯುವಂತೆ ಮಾಡಿದರು.

ಉಡುತಡಿ ಗ್ರಾಮವಾಸಿಗಳಾದ ನಿರ್ಮಲ ಮತ್ತು ಸುಮತಿಯರ ಮಗಳಾಗಿ ಜನಿಸಿದ. ಮಹಾದೇವಿ, ಪರಮಶಿವಭಕ್ತರಾಗಿದ್ದರು. ಶ್ರೀಶೈಲದ ಚೆನ್ನಮಾಲ್ಲಿಕಾರ್ಜುನನೇ ಇವರ ಆರಾಧ್ಯದೈವವಾದನು. ಶಿವಭಕ್ತೆಯಾದ ಮಹಾದೇವಿಯು ಕೆಲವು ಷರತ್ತುಗಳನ್ನು ಹಾಕಿ ರಾಜ ಕೌಶಿಕನ ಮಡದಿಯಾದಳು. ಆಕೆಯ ಷರತ್ತುಗಳನ್ನು ರಾಜನು ಮುರಿಯಲು ಸಂಸಾರವನ್ನು ತ್ಯಜಿಸಿ ವಿರಾಗಿಯಾದಳು. ಎಲ್ಲರಿಗೂ ಅಕ್ಕನಾಗಿ ಅಕ್ಕಮಹಾದೇವಿ ಎನಿಸಿದಳು. ಶಿವಶರಣರಾದ ಬಸವಣ್ಣ, ಅಲ್ಲಮಪ್ರಭು, ಸಿದ್ಧರಾಮಣ್ಣನವರ ಸಮಕಾಲೀನರು ಇವರು.

ಸರ್ವಸಂಗ ಪರಿತ್ಯಾಗಿಯಾಗಿ ಶಿವನನ್ನೇ ಪತಿಯೆಂದು ನಂಬಿ **ಚೆನ್ನಮಲ್ಲಿಕಾರ್ಜುನ ಅಂಕಿತದೊಡನೆ** ಅನೇಕ ವಚನಗಳನ್ನು ತಿಳಿಗನ್ನಡದಲ್ಲಿ ರಚಿಸಿ ಗಹನವಾದ ತತ್ವಗಳನ್ನು ಸಾಮಾನ್ಯ ಜನರಿಗೂ ತಲುಪಿಸಿದರು. ಈ ವಚನಗಳಿಗೆ ರಾಗ ತಾಳಗಳನ್ನು ನಿರ್ದಿಷ್ಟವಾಗಿ ಸೂಚಿಸದೆ ತಮ್ಮಿಷ್ಟದಂತೆ ಹಾಡಿದರು. ಶಿವಶರಣೆಯಾಗಿ ಅಕ್ಕನವರು ಅಂದಿನ ಸಮಾಜದಲ್ಲಿ ಸ್ತ್ರೀಯರಿಗೆ ಉನ್ನತಸ್ಥಾನವನ್ನು ಗಳಿಸಿಕೊಟ್ಟರು.

### 2. ಬಸವಣ್ಣನವರು (ಕ್ರಿ.ಶ. 1130 - 1167)

ಭಕ್ತಿ ಭಂಡಾರಿ ಬಸವಣ್ಣನವರು ಸಮಾಜ ಸುಧಾರಕರು. ಜನಗಳಲ್ಲಿ ಮೇಲುಕೀಳೆಂಬ ಭಾವನೆಯನ್ನು ತೊಡೆದು ಹಾಕಲು ಯತ್ನಿಸಿ ಭಾವೈಕ್ಯತೆಯನ್ನು ಸಾಧಿಸಲು ಶ್ರಮಿಸಿದವರು. ವೀರಶೈವ ಮತವನ್ನು ಬಲಪಡಿಸಿದರು, ಗಹನವಾದ ವಿಷಯಗಳನ್ನು ವಚನಗಳ ಮೂಲಕ ತಿಳಿಗನ್ನಡದಲ್ಲಿ ಎಲ್ಲರಿಗೂ ಅರ್ಥವಾಗುವಂತೆ ತಿಳಿಸಿದರು. ಹನ್ನೆರಡನೆಯ ಶತಮಾನದಲ್ಲೇ ಸಾಮಾಜಿಕ ಪ್ರಜ್ಞೆಯನ್ನು ಜನರಲ್ಲಿ ಮೂಡಿಸುವಂಥಹ ಕಾರ್ಯವು ಕನ್ನಡಿಗರಾದ ಇವರಿಂದ ನಡೆಯಿತು. ಇದು ಕರ್ನಾಟಕ ಜನತೆಗೆ ಚರಿತ್ರಾರ್ಹವಾದ ಹೆಮ್ಮೆಯ ವಿಷಯ.

ಬಾಗೇವಾಡಿಯ ಮಾದರಸ ಮತ್ತು ಮಾದಲಾಂಬಿಕೆ ದಂಪತಿಗಳ ಪುತ್ರನಾಗಿ ಜನಿಸಿದ ಬಸವಣ್ಣನವರು, ಬಿಜ್ಜಳನ

ಮಂತ್ರಿಯಾಗಿ ಅಧಿಕಾರವನ್ನು ವಹಿಸಿಕೊಂಡರು. ಜೊತೆಗೆ ಶಿವಶರಣರ ಸೇವೆಯನ್ನು ಮಾಡುತ್ತಾ, ಧರ್ಮಪ್ರಚಾರ ಕಾರ್ಯದಲ್ಲಿ ತೊಡಗಿದರು. ಸಂಗಮೇಶ್ವರನ ಭಕ್ತರಾಗಿ '**ಕೂಡಲಸಂಗಮದೇವ**' ಎಂಬ ಅಂಕಿತದೊಡನೆ ಅನೇಕ ವಚನಗಳನ್ನು ಕನ್ನಡದಲ್ಲಿ ರಚಿಸಿದರು. ಅನೇಕ ವಚನಗಳಲ್ಲಿ ಸಂಗೀತಕ್ಕೆ ಸಂಬಂಧಪಟ್ಟ ರಾಗ ತಾಳ ಮತ್ತು ವಾದ್ಯಗಳ ವಿಷಯಗಳನ್ನು ತಿಳಿಸಿದ್ದಾರೆ. ವಚನಗಳಿಗೆ ರಾಗ ತಾಳಗಳನ್ನು ಸೂಚಿಸದೆ, ಗಾಯಕರ ಮನೋಧರ್ಮಕ್ಕೆ ಸ್ವಾತಂತ್ರ್ಯವನ್ನು ಕೊಟ್ಟಿದ್ದಾರೆ. ಸಾಮಾಜಿಕ ಕಾರ್ಯಗಳಲ್ಲಿ ನೆರವಾಗಿದ್ದ, ತಮ್ಮನ್ನೇ ಅರ್ಪಿಸಿಕೊಂಡ ಶಿವಶರಣರ, ಶಿವಶರಣೆಯರ ಚರಿತ್ರೆಯನ್ನು ಪ್ರತಿಯೊಬ್ಬರೂ ತಿಳಿದುಕೊಳ್ಳುವುದು ಅತ್ಯವಶ್ಯಕವಾದ ಕಾರ್ಯವೇ ಸರಿ.

ವಾಗ್ಗೇಯಕಾರರ, ಶಿವಶರಣ - ಶರಣೆಯರ ಜೀವನ ಚರಿತ್ರೆಯನ್ನು ಪರಿಚಯ ಮಾಡಿಕೊಳ್ಳುವುದರಿಂದ, ವಿದ್ಯಾರ್ಥಿಯು ಉತ್ತಮ ಗುರಿಯನ್ನು ಹೊಂದಿ ಸಮಾಜದ ಉದ್ಧಾರ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲು ಪ್ರೇರಕ ಶಕ್ತಿಯಾಗುವುದು. ಬಸವಣ್ಣನವರ ಕೊಡುಗೆಯು ಸ್ಫೂರ್ತಿದಾಯಕವಾಗಿ, ಹೊಸದನ್ನು ಗ್ರಹಿಸುವ ಹಾಗೂ ಸೃಷ್ಟಿಸುವ ಶಕ್ತಿಯನ್ನು ಸಂಗೀತ ವಿದ್ಯಾರ್ಥಿಗಳಲ್ಲಿ ಮೂಡಿಸುವುದು.



# ಲಕ್ಷ್ಯಸಂಗೀತ

## ಪತ್ರಿಕೆ - 1

**ಸೂಚನೆ** : ಸಂಗೀತ ಪಠ್ಯವಸ್ತುವಿನ ರಾಗ ಲಕ್ಷಣದಲ್ಲಿ ಸೂಚಿಸಿರುವ ರಾಗಗಳ ಪರಿಚಯ ಅತ್ಯಗತ್ಯ. ಈ ರಾಗಗಳಲ್ಲಿ ಕೃತಿಗಳನ್ನೇ ಮಾಡಬೇಕೆಂಬುದು ಕಡ್ಡಾಯವಿಲ್ಲ. ಯಾವ ರಚನೆಯ ಮೂಲಕವಾದರೂ ಈ ರಾಗಗಳ ಪರಿಚಯವನ್ನು ಮಾಡಿಸಬಹುದು. ಅಂತೆಯೇ ಪಠ್ಯ ಪುಸ್ತಕದಲ್ಲಿ ಕೊಟ್ಟಿರುವ ಕೃತಿಗಳನ್ನೇ ಪಾಠಮಾಡಬೇಕೆಂಬುದು ಕಡ್ಡಾಯವಿಲ್ಲ.ಹಿರಿಯ ವಾಗ್ಗೇಯಕಾರರ ರಚನೆಗಳನ್ನೇ ಕಲಿಸಬೇಕು.

### ಕ್ರಸಂ - **10** ಸ್ವರಾವಳಿಗಳು - ರಾಗ - ಮಾಯಾಮಾಳವಗೌಳ

**ಸರಳವರಸೆಗಳು - 7** | **ತಾಳ: ಆದಿತಾಳ**

ಅಂಗಗಳು 1 ಲಘು 2 ದ್ರುತಗಳು ( 4+2+2= 8 ಅಕ್ಷರಗಳು)

1. ॥ ಸ ರಿ ಗ ಮ । ಪ ದ । ನಿ ಸ̇ ॥ ಸ̇ ನಿ ದ ಪ । ಮ ಗ । ರಿ ಸ ॥

2. ॥ ಸ ರಿ ಗ ಮ । ಸ ರಿ । ಗಮ ॥ ಸ ರಿ ಗ ಮ । ಪ ದ । ನಿ ಸ̇ ॥
   ॥ ಸ̇ ನಿ ದ ಪ । ಸ̇ ನಿ । ದ ಪ ॥ ಸ̇ ನಿ ದ ಪ । ಮ ಗ । ರಿ ಸ ॥

3. ॥ ಸ ರಿ ಗ ಮ । ಸ ರಿ । ಸ ರಿ ॥ ಸ ರಿ ಗ ಮ । ಪ ದ । ನಿ ಸ̇ ॥
   ॥ ಸ̇ ನಿ ದ ಪ । ಸ̇ ನಿ । ಸ̇ ನಿ ॥ ಸ̇ ನಿ ದ ಪ । ಮ ಗ । ರಿ ಸ ॥

4. ॥ ಸ ರಿ ಗ ಸ । ರಿ ಗ । ಸ ರಿ ॥ ಸ ರಿ ಗ ಮ । ಪ ದ । ನಿ ಸ̇ ॥
   ॥ ಸ̇ ನಿ ದ ಸ̇ । ನಿ ದ । ಸ̇ ನಿ ॥ ಸ̇ ನಿ ದ ಪ । ಮ ಗ । ರಿ ಸ ॥

5. ॥ ಸ ರಿ ಗ ಮ । ಪಾ । ಸ ರಿ ॥ ಸ ರಿ ಗ ಮ । ಪ ದ । ನಿ ಸ̇ ॥
   ॥ ಸ̇ ನಿ ದ ಪ । ಮಾ । ಸ̇ ನಿ ॥ ಸ̇ ನಿ ದ ಪ । ಮ ಗ । ರಿ ಸ ॥

6. ॥ ಸ ರಿ ಗ ಮ । ಪ ಮ । ಗ ರಿ ॥ ಸ ರಿ ಗ ಮ । ಪ ದ । ನಿ ಸ̇ ॥
   ॥ ಸ̇ ನಿ ದ ಪ । ಮ ಪ । ದ ನಿ ॥ ಸ̇ ನಿ ದ ಪ । ಮ ಗ । ರಿ ಸ ॥

7. ॥ ಸ ರಿ ಗ ಮ । ಪ ಮ । ದ ಪ ॥ ಸ ರಿ ಗ ಮ । ಪ ದ । ನಿ ಸ̇ ॥
   ॥ ಸ̇ ನಿ ದ ಪ । ಮ ಪ । ಗ ಮ ॥ ಸ̇ ನಿ ದ ಪ । ಮ ಗ । ರಿ ಸ ॥

**ತಾರಸ್ಥಾಯಿವರಸೆಗಳು- 3** | **ಆದಿತಾಳ**

1. ॥ ಸ ರಿ ಗ ಮ । ಪ ದ ನಿ ಸ̇ ॥ ಸಾ̇ ; । ಸಾ̇ । ; ॥
   ॥ ದ ನಿ ಸ̇ ರಿ̇ । ಸ̇ ನಿ ದ ಪ ॥ ಸ̇ ನಿ ದ ಪ । ಮಗ । ರಿಸ ॥

2\. ॥ ಸರಿಗಮ । ಪದ । ನಿಸ ॥ ಸಾ ; । ಸಾ । ; ॥

॥ ದನಿಸರಿ । ಸ ಸ । ರಿ ಸ ॥ ಸರಿಸನಿ । ದಪ । ಮಪ ॥

॥ ದನಿಸರಿ । ಸನಿ । ದಪ ॥ ಸನಿದಪ । ಮಗ । ರಿ ಸ ॥

3\. ॥ ಸರಿಗಮ । ಪದ । ನಿಸ ॥ ಸಾ ; । ಸಾ । ; ॥

॥ ದನಿಸರಿ । ಗಮ । ಗರಿ ॥ ಸರಿಸನಿ । ದಪ । ಮಪ ॥

॥ ದನಿಸರಿ । ಸ ಸ । ರಿ ಸ ॥ ಸರಿಸನಿ । ದಪ । ಮಪ ॥

॥ ದನಿಸರಿ । ಸನಿ । ದಪ ॥ ಸನಿದಪ । ಮಗ । ರಿ ಸ ॥

## ಮಂದ್ರಸ್ಥಾಯಿ ವರಸೆಗಳು - 3 ಆದಿತಾಳ

1\. ॥ ಸನಿದಪ । ಮಗ । ರಿಸ ॥ ಸಾ; । ಸಾ । ; ॥

॥ ಗರಿಸನಿ । ಸರಿ । ಗಮ ॥ ಸರಿಗಮ । ಪದ । ನಿಸ ॥

2\. ॥ ಸನಿದಪ । ಘಗ । ರಿಸ ॥ ಸಾ; । ಸಾ । ; ॥

॥ ಗರಿಸನಿ । ಸಸ । ನಿಸ ॥ ಸನಿಸರಿ । ಗಮ । ಪಮ ॥

॥ ಗರಿಸನಿ । ಸರಿ । ಗಮ ॥ ಸರಿಗಮ । ಪದ । ನಿಸ ॥

3\. ॥ ಸನಿದಪ । ಮಗ । ರಿಸ ॥ ಸಾ; । ಸಾ । ; ॥

॥ ಗರಿಸನಿ । ಧನಿ । ಸನಿ ॥ ಸನಿಸರಿ । ಗಮ । ಪಮ ॥

॥ ಗರಿಸನಿ । ಸಸ । ನಿಸ ॥ ಸನಿಸರಿ । ಗಮ । ಪಮ ॥

॥ ಗರಿಸನಿ । ಸರಿ । ಗಮ ॥ ಸರಿಗಮ । ಪದ । ನಿಸ ॥

## ದಾಟುವರಸೆಗಳು- 3

ಗಮನಿಸಿ :- ದಾಟು ಪ್ರಯೋಗವಿರುವ ಯಾವ ವರಸೆಗಳನ್ನೂ ಇಲ್ಲಿ ಬಳಸಬಹುದು.

### ದಾಟು ವರಸೆಗಳು ಆದಿತಾಳ

(4+2+2, = 8 ಅಕ್ಷರಗಳು )

1\. ॥ ಸರಿಸಗ । ರಿಮ । ಗರಿ ॥ ಸರಿ ಗಮ । ಪದ । ನಿ ಸ ॥

॥ ಸನಿಸದ । ನಿ ಪ । ದನಿ ॥ ಸನಿ ದ ಪ । ಮಗ । ರಿ ಸ ॥

2. ॥ ಸ ಗ ರಿ ಮ । ಸ ಮ । ಗ ರಿ ॥ ಸ ರಿ ಗ ಮ । ಪ ದ । ನಿ ಸ಼ ॥

॥ ಸ಼ ದ ನಿ ಪ । ಸ಼ ಪ । ದ ನಿ ॥ ಸ಼ ನಿ ದ ಪ । ಮ ಗ । ರಿ ಸ ॥

3. ॥ ಸ ಮ ಗ ಮ । ಸ ರಿ । ಗ ಮ ॥ ರಿ ಪ ಮ ಪ । ರಿ ಗ । ಮ ಪ ॥

॥ ಗ ದ ಪ ದ । ಗ ಮ । ಪ ದ ॥ ಮ ನಿ ದ ನಿ । ಮ ಪ । ದ ನಿ ॥

॥ ಪ ಸ಼ ನಿ ಸ಼ । ಪ ದ । ನಿ ಸ಼ ॥ ಸ಼ ಪ ದ ಪ । ಸ಼ ನಿ । ದ ಪ ॥

॥ ನಿ ಮ ಪ ಮ । ನಿ ದ । ಪ ಮ ॥ ದ ಗ ಮ ಗ । ದ ಪ । ಮ ಗ ॥

॥ ಪ ರಿ ಗ ರಿ । ಪ ಮ । ಗ ರಿ ॥ ಮ ಸ ರಿ ಸ । ಮ ಗ । ರಿ ಸ ॥

## ಜಂಟಿವರಸೆಗಳು (5) ಆದಿತಾಳ

(8+4+4, = 16 ಅಕ್ಷರಗಳು) (ವಿಳಂಬ ಕಾಲದ ಎಣಿಕೆಗಳು)

1. ॥ ಸ ಸ ರಿ ರಿ ಗ ಗ ಮ ಮ । ಪ ಪ ದ ದ । ನಿ ನಿ ಸ಼ ಸ಼ ॥

॥ ಸ಼ ಸ಼ ನಿ ನಿ ದ ದ ಪ ಪ । ಮ ಮ ಗ ಗ । ರಿ ರಿ ಸ ಸ ॥

2. ॥ ಸ ಸ ರಿ ರಿ ಗ ಗ ಮ ಮ । ರಿ ರಿ ಗ ಗ । ಮ ಮ ಪ ಪ ॥

॥ ಗ ಗ ಮ ಮ ಪ ಪ ದ ದ । ಮ ಮ ಪ ಪ । ದ ದ ನಿ ನಿ ॥

॥ ಪ ಪ ದ ದ ನಿ ನಿ ಸ಼ ಸ಼ । ಸ಼ ಸ಼ ನಿ ನಿ । ದ ದ ಪ ಪ ॥

॥ ನಿ ನಿ ದ ದ ಪ ಪ ಮ ಮ । ದ ದ ಪ ಪ । ಮ ಮ ಗ ಗ ॥

॥ ಪ ಪ ಮ ಮ ಗ ಗ ರಿ ರಿ । ಮ ಮ ಗ ಗ । ರಿ ರಿ ಸ ಸ ॥

3. ॥ ಸ ಸ ರಿ ರಿ ಗ ಗ ರಿ ರಿ । ಸ ಸ ರಿ ರಿ । ಗ ಗ ಮ ಮ ॥

॥ ರಿ ರಿ ಗ ಗ ಮ ಮ ಗ ಗ । ರಿ ರಿ ಗ ಗ । ಮ ಮ ಪ ಪ ॥

॥ ಗ ಗ ಮ ಮ ಪ ಪ ಮ ಮ । ಗ ಗ ಮ ಮ । ಪ ಪ ದ ದ ॥

॥ ಮ ಮ ಪ ಪ ದ ದ ಪ ಪ । ಮ ಮ ಪ ಪ । ದ ದ ನಿ ನಿ ॥

॥ ಪ ಪ ದ ದ ನಿ ನಿ ದ ದ । ಪ ಪ ದ ದ । ನಿ ನಿ ಸ ಸ ॥

॥ ಸ಼ ಸ಼ ನಿ ನಿ ದ ದ ನಿ ನಿ । ಸ಼ ಸ಼ ನಿ ನಿ । ದ ದ ಪ ಪ ॥

॥ ನಿ ನಿ ದ ದ ಪ ಪ ದ ದ । ನಿ ನಿ ದ ದ । ಪ ಪ ಮ ಮ ॥

॥ ದ ದ    ಪ ಪ ಮಮ ಪ ಪ    । ದ ದ ಪ ಪ    । ಮಮ ಗ ಗ    ॥
॥ ಪ ಪ    ಮಮ ಗಗ ಮಮ    । ಪ ಪ ಮಮ    । ಗ ಗ ರಿ ರಿ    ॥
॥ ಮಮ    ಗ ಗ  ರಿ ರಿ ಗ ಗ    । ಮಮ ಗ ಗ    । ರಿ ರಿ ಸ ಸ    ॥

4. ॥ ಸ ಸ ರಿ  ಸ ಸ ರಿ ಸ ರಿ    । ಸ ಸ ರಿ ರಿ    । ಗ ಗ ಮಮ    ॥
॥ ರಿ ರಿ ಗ  ರಿ ರಿ ಗ ರಿ ಗ    । ರಿ ರಿ ಗ ಗ    । ಮಮ ಪ ಪ    ॥
॥ ಗ ಗಮ  ಗ ಗ ಮ ಗಮ    । ಗ ಗ ಮಮ    । ಪ ಪ ದ ದ    ॥
॥ ಮಮಪ ಮಮಪ ಮಪ    । ಮಮ ಪ ಪ    । ದ ದ ನಿ ನಿ    ॥
॥ ಪ ಪದ  ಪ ಪ ದ ಪ ದ    । ಪ ಪ ದ ದ    । ನಿ ನಿ ಸ̇ ಸ̇    ॥
॥ ಸ̇ ಸ̇ ನಿ  ಸ̇ ಸ̇ ನಿ ಸ̇ ನಿ    । ಸ̇ ಸ̇ ನಿ ನಿ    । ದ ದ ಪ ಪ    ॥
॥ ನಿ ನಿ ದ ನಿ ನಿ ದ ನಿ ದ    । ನಿ ನಿ ದ ದ    । ಪ ಪ ಮಮ    ॥
॥ ದ ದ ಪ  ದ ದ ಪ ದ ಪ    । ದ ದ ಪ ಪ    । ಮಮ ಗ ಗ    ॥
॥ ಪ ಪ ಮ ಪ ಪ ಮ ಪಮ    । ಪ ಪ ಮಮ    । ಗ ಗ  ರಿ ರಿ    ॥
॥ ಮಮ ಗ ಮಮಗ ಮಗ    । ಮಮ ಗ ಗ    । ರಿ ರಿ  ಸ ಸ    ॥

5. ॥ ಸ ಸ ರಿ ರಿ ಗ  ಸ ರಿ ಗ    । ಸ ಸ ರಿ ರಿ    । ಗ ಗ ಮ ಮ ॥
॥ ರಿ ರಿ ಗ ಗಮ  ರಿ ಗ ಮ    । ರಿ ರಿ ಗ ಗ    । ಮಮಪ ಪ ॥
॥ ಗ ಗ ಮಮಪ  ಗ ಮಪ    । ಗ ಗ ಮಮ    । ಪ ಪ  ದ ದ ॥
॥ ಮಮ ಪ ಪ ದ ಮ ಪದ    । ಮಮ ಪ ಪ    । ದ ದ  ನಿ ನಿ ॥
॥ ಪ ಪ  ದ ದ ನಿ ಪ ದ ನಿ    । ಪ ಪ ದ ದ    । ನಿ ನಿ ಸ̇ ಸ̇ ॥
॥ ಸ̇ ಸ̇  ನಿ ನಿ ದ  ಸ̇ ನಿ ದ    । ಸ̇ ಸ̇ ನಿ ನಿ    । ದ ದ ಪ  ಪ ॥
॥ ನಿ ನಿ  ದ ದ ಪ  ನಿ ದ ಪ    । ನಿ ನಿ ದ ದ    । ಪ  ಪ ಮಮ ॥
॥ ದ ದ ಪಪ ಮ  ದ ಪ ಮ    । ದ ದ ಪ ಪ    । ಮಮ ಗ ಗ ॥
॥ ಪ ಪ ಮ ಮಗ ಪ ಮ ಗ    । ಪ ಪ ಮಮ    । ಗ ಗ  ರಿ  ರಿ ॥
॥ ಮಮ ಗ ಗ ರಿ  ಮ ಗ ರಿ    । ಮಮ ಗ ಗ    । ರಿ ರಿ ಸ ಸ ॥

ಐ ❖ ❖❖ ❀ ❖ ❖❖ ಆ

# ಅಲಂಕಾರಗಳು - 7

## ಸೂಳಾದಿ ಸಪ್ತ ತಾಳಗಳು

### 1. ಚತುರಶ್ರ ಜಾತಿ ಧ್ರುವತಾಳ

ಅಂಗಗಳು - 1 ಲಘು 1 ದ್ರುತ 2 ಲಘು

4 + 2 +4 +4 = 14 ಅಕ್ಷರಗಳು

1. ॥ ಸರಿಗಮ । ಗರಿ । ಸರಿಗರಿ । ಸರಿಗಮ ॥

॥ ರಿಗಮಪ । ಮಗ । ರಿಗಮಗ । ರಿಗಮಪ ॥

॥ ಗಮಪದ । ಪಮ । ಗಮಪಮ । ಗಮಪದ ॥

॥ ಮಪದನಿ । ದಪ । ಮಪದಪ । ಮಪದನಿ ॥

॥ ಪದನಿಸ । ನಿದ । ಪದನಿದ । ಪದನಿಸ ॥

॥ ಸನಿದಪ । ದನಿ । ಸನಿದನಿ । ಸನಿದಪ ॥

॥ ನಿದಪಮ । ಪದ । ನಿದಪದ । ನಿದಪಮ ॥

॥ ದಪಮಗ । ಮಪ । ದಪಮಪ । ದಪಮಗ ॥

॥ ಪಮಗರಿ । ಗಮ । ಪಮಗಮ । ಪಮಗರಿ ॥

॥ ಮಗರಿಸ । ರಿಗ । ಮಗರಿಗ । ಮಗರಿಸ ॥

### 2. ಚತುರಶ್ರ ಜಾತಿ ಮಠ್ಯ ತಾಳ

ಅಂಗಗಳು - 1 ಲಘು 1 ದ್ರುತ 1 ಲಘು

4 + 2 +4 = 10 ಅಕ್ಷರಗಳು

॥ ಸರಿಗರಿ । ಸರಿ । ಸರಿಗಮ ॥

॥ ರಿಗಮಗ । ರಿಗ । ರಿಗಮಪ ॥

॥ ಗಮಪಮ । ಗಮ । ಗಮಪದ ॥

॥ ಮಪದಪ । ಮಪ । ಮಪದನಿ ॥

॥ ಪದನಿದ । ಪದ । ಪದನಿಸ ॥

॥ ಸನಿದನಿ । ಸನಿ । ಸನಿದಪ ॥

॥ ನಿದಪದ । ನಿದ । ನಿದಪಮ ॥

॥ ದಪಮಪ । ದಪ । ದಪಮಗ ॥

॥ ಪಮಗಮ । ಪಮ । ಪಮಗರಿ ॥

॥ ಮಗರಿಗ । ಮಗ । ಮಗರಿಸ ॥

### 3. ಚತುರಶ್ರ ಜಾತಿ ರೂಪಕ ತಾಳ

ಅಂಗಗಳು - 1 ಧೃತ, 1 ಲಘು

2 + 4 = 6 ಅಕ್ಷರಗಳು

| | | | |
|---|---|---|---|
| ॥ ಸ ರಿ | । ಸ ರಿ ಗ ಮ | ॥ ರಿ ಗ | । ರಿ ಗ ಮ ಪ ॥ |
| ॥ ಗ ಮ | । ಗ ಮ ಪ ದ | ॥ ಮ ಪ | । ಮ ಪ ದ ನಿ ॥ |
| ॥ ಪ ದ | । ಪ ದ ನಿ ಸ | ॥ ಸ ನಿ | । ಸ ನಿ ದ ಪ ॥ |
| ॥ ನಿ ದ | । ನಿ ದ ಪ ಮ | ॥ ದ ಪ | । ದ ಪ ಮ ಗ ॥ |
| ॥ ಪ ಮ | । ಪ ಮ ಗ ರಿ | ॥ ಮ ಗ | । ಮ ಗ ರಿ ಸ ॥ |

### 4. ಮಿಶ್ರ ಜಾತಿ ಝಂಪೆತಾಳ

ಅಂಗಗಳು - 1 ಲಘು 1 ಅನುದ್ರುತ 1 ದ್ರುತ

7 + 1 + 2 = 10 ಅಕ್ಷರಗಳು

| | | | |
|---|---|---|---|
| ॥ ಸ ರಿ ಗ | ಸ ರಿ ಸ ರಿ । | ಗ | । ಮಾ ॥ |
| ॥ ರಿ ಗ ಮ | ರಿ ಗ ರಿ ಗ । | ಮ | । ಪಾ ॥ |
| ॥ ಗ ಮ ಪ | ಗ ಮ ಗ ಮ । | ಪ | । ದಾ ॥ |
| ॥ ಮ ಪ ದ | ಮ ಪ ಮ ಪ । | ದ | । ನೀ ॥ |
| ॥ ಪ ದ ನಿ | ಪ ದ ಪ ದ । | ನಿ | । ಸಾ ॥ |
| ॥ ಸ ನಿ ದ | ಸ ನಿ ಸ ನಿ । | ದ | । ಪಾ ॥ |
| ॥ ನಿ ದ ಪ | ನಿ ದ ನಿ ದ । | ಪ | । ಮಾ ॥ |
| ॥ ದ ಪ ಮ | ದ ಪ ದ ಪ । | ಮ | । ಗಾ ॥ |
| ॥ ಪ ಮ ಗ | ಪ ಮ ಪ ಮ । | ಗ | । ರೀ ॥ |
| ॥ ಮ ಗ ರಿ | ಮ ಗ ಮ ಗ । | ರಿ | । ಸಾ ॥ |

### 5. ತಿಶ್ರ ಜಾತಿ ತ್ರಿಪುಟತಾಳ

ಅಂಗಗಳು - 1 ಲಘು 2 ದ್ರುತಗಳು

3 + 2 + 2 = 7 ಅಕ್ಷರಗಳು

| | | |
|---|---|---|
| ॥ ಸ ರಿ ಗ | । ಸ ರಿ | । ಗ ಮ ॥ |
| ॥ ರಿ ಗ ಮ | । ರಿ ಗ | । ಮ ಪ ॥ |
| ॥ ಗ ಮ ಪ | । ಗ ಮ | । ಪ ದ ॥ |
| ॥ ಮ ಪ ದ | । ಮ ಪ | । ದ ನಿ ॥ |
| ॥ ಪ ದ ನಿ | । ಪ ದ | । ನಿ ಸ ॥ |
| ॥ ಸ ನಿ ದ | । ಸ ನಿ | । ದ ಪ ॥ |
| ॥ ನಿ ದ ಪ | । ನಿ ದ | । ಪ ಮ ॥ |
| ॥ ದ ಪ ಮ | । ದ ಪ | । ಮ ಗ ॥ |
| ॥ ಪ ಮ ಗ | । ಪ ಮ | । ಗ ರಿ ॥ |
| ॥ ಮ ಗ ರಿ | । ಮ ಗ | । ರಿ ಸ ॥ |

6. ಖಂಡಜಾತಿ ಅಟತಾಳ ಅಂಗಗಳು - 2 ಲಘು 2 ದ್ರುತಗಳು

5+5 + 2 + 2= 14 ಅಕ್ಷರಗಳು

॥ ಸ ರೀ ಗಾ । ಸಾ ರಿ ಗಾ । ಮಾ । ಮಾ ॥

॥ ರಿ ಗಾ ಮಾ । ರೀ ಗಮಾ । ಪಾ । ಪಾ ॥

॥ ಗ ಮಾ ಪಾ । ಗಾ ಮ ಪಾ । ದಾ । ದಾ ॥

॥ ಮ ಪಾ ದಾ । ಮಾ ಪ ದಾ । ನೀ । ನೀ ॥

॥ ಪ ದಾ ನೀ । ಪಾ ದ ನೀ । ಸಾ । ಸಾ ॥

॥ ಸ ನೀ ದಾ । ಸಾ ನಿ ದಾ । ಪಾ । ಪಾ ॥

॥ ನಿ ದಾ ಪಾ । ನೀ ದ ಪಾ । ಮಾ । ಮಾ ॥

॥ ದ ಪಾ ಮಾ । ದಾ ಪ ಮಾ । ಗಾ । ಗಾ ॥

॥ ಪ ಮಾ ಗಾ । ಪಾ ಮ ಗಾ । ರೀ । ರೀ ॥

॥ ಮ ಗಾ ರೀ । ಮಾ ಗ ರೀ । ಸಾ । ಸಾ ॥

7. ಚತುರಶ್ರಜಾತಿ ಏಕತಾಳ ಅಂಗಗಳು - 1 ಲಘು 4 ಅಕ್ಷರಗಳು

॥ ಸ ರಿ ಗ ಮ ॥ ರಿ ಗ ಮ ಪ ॥

॥ ಗ ಮ ಪ ದ ॥ ಮ ಪ ದ ನಿ ॥

॥ ಪ ದ ನಿ ಸ ॥ ಸ ನಿ ದ ಪ ॥

॥ ನಿ ದ ಪ ಮ ॥ ದ ಪ ಮ ಗ ॥

॥ ಪ ಮ ಗ ರಿ ॥ ಮ ಗ ರಿ ಸ ॥

8. ಸಂಕೀರ್ಣಜಾತಿ ಏಕತಾಳ ಅಂಗಗಳು - 1 ಲಘು 9ಅಕ್ಷರಗಳು

॥ ಸಾರಿಗಮ ಸರಿಗಮ ॥ ರೀಗಮಪ ರಿಗಮಪ ॥ ಗಾಮಪದ ಗಮಪದ ॥

॥ ಮಾಪದನಿ ಮಪದನಿ ॥ ಪಾದನಿಸ ಪದನಿಸ ॥ ಸಾನಿದಪ ಸನಿದಪ ॥

॥ ನೀದಪಮ ನಿದಪಮ ॥ ದಾಪಮಗ ದಪಮಗ ॥ ಪಾಮಗರಿ ಪಮಗರಿ ॥ ಮಾಗರಿಸ ಮಗರಿಸ ॥

(ಸೂಚನೆ - ಸಂಕೀರ್ಣಜಾತಿ ಲಘುವನ್ನು ಎಣಿಸುವಾಗ ಒಂದು ಘಾತವನ್ನು ಹಾಕಿ ಕಿರುಬೆರಳಿನಿಂದ ಎಣಿಕೆಯನ್ನು ಪ್ರಾರಂಭಿಸಿ ಹೆಬ್ಬೆರಳನ್ನು ಎಣಿಸಿದ ನಂತರ ಮತ್ತೆ ಕಿರುಬೆರಳನ್ನು, ಉಂಗುರ ಬೆರಳನ್ನು, ಮಧ್ಯದ ಬೆರಳನ್ನು ಎಣಿಸಬೇಕು.

ಕ್ರಸಂ - **11**

## ಗೀತೆಗಳು- 10

## ಪಿಳ್ಳಾರಿಗೀತೆಗಳು -4

ರಾಗ - ಮಲಹರಿ ವಾಗ್ಗೇಯಕಾರರು - ಪುರಂದರದಾಸರು ತಾಳ - ರೂಪಕತಾಳ

### ಗಣೇಶ ಸ್ತುತಿ

ಆ : ಸರಿಮಪದಸ<br>
ಅವ: ಸದಪಮಗರಿಸ

॥ ಶ್ರೀ ಗಣನಾಥ ಸಿಂಧೂರವರ್ಣ ಕರುಣಸಾಗರ ಕರಿವದನ ॥ ಲಂ<br>
॥ ಸಿದ್ಧ ಚಾರಣ ಗಣಸೇವಿತ ಸಿದ್ಧಿವಿನಾಯಕ ತೇನಮೋನಮೋ ॥ ಲಂ<br>
॥ ಸಕಲ ವಿದ್ಯಾದಿ ಪೂಜಿತ ಸರ್ವೋತ್ತಮ ತೇ ನಮೋ ನಮೋ ॥ ಲಂ<br>
॥ ಲಂಬೋದರ ಲಕುಮಿಕರ ಅಂಬಾಸುತ ಅಮರವಿನುತ ॥

ಅತ್ಯಂತ ದೊಡ್ಡದಾದ ಉದರ (ಹೊಟ್ಟೆ) ವನ್ನು ಹೊಂದಿರುವವನೂ, ಸಂಪತ್ತನ್ನು ನೀಡುವವನೂ (ಅಂಬಾ) ಪಾರ್ವತಿಯ ಪುತ್ರನೂ, ಸಕಲ ದೇವತೆಗಳಿಂದ ವಂದಿಸಲ್ಪಡುವವನೂ, ಶ್ರೇಷ್ಠನಾದವನೂ, ಗಣಗಳಿಗೆ ಒಡೆಯನೂ ಚಂದ್ರವರ್ಣನೂ ಕರುಣೆಯ ಸಮುದ್ರವೇ ಆದವನೂ, ಆನೆಯ ಮುಖವನ್ನು ಹೊಂದಿರುವವನೂ, ಸಿದ್ಧರು, ಚಾರಣ ಮುಂತಾದ ಗಣಗಳಿಂದ ಸೇವಿಸಲ್ಪಡುವವನೂ, ಸಿದ್ಧಿಯನ್ನು ಉಂಟುಮಾಡುವವನೂ ಆದ ವಿನಾಯಕನೇ ನಿನಗೆ ನಮಸ್ಕಾರ. ಎಲ್ಲಾ ವಿದ್ಯೆಗಳ ಆರಂಭದಲ್ಲೂ ಪೂಜೆಯನ್ನು ಪಡೆಯುವ ಸರ್ವೋತ್ತಮಾ ! ನಿನಗೆ ನಮಸ್ಕಾರ.

| | | | | |
|---|---|---|---|---|
| ॥ ಸ ರಿ | । ಮಾ ಗ ರಿ | ॥ ಸ ರಿ | । ಗ ರಿ ಸಾ ॥ | |
| ॥ ಲ ಂ | । ಬೋ ದ ರ | ॥ ಲ ಕು | । ಮಿ ಕ ರ ॥ | |
| ॥ ರಿ ಮ | । ಪದ ಮ ಪ | ॥ ದ ಪ | । ಮ ಗ ರಿ ಸ ॥ | |
| ॥ ಅ ಂ | । ಬಾ ಸು ತ | ॥ ಅ ಮ | । ರ ವಿ ನು ತ ॥ | ಲಂಬೋ |
| ॥ ಮ ಪ | । ದ ಸ ಸ ರಿ | ॥ ರಿ ಸ | । ದ ಪ ಮ ಪ॥ | |
| ॥ ಶ್ರೀ | । ಗ ಣ ನಾ ಥ | ॥ ಸಿಂ ಧೂ। ರ . ವ ರ್ಣ ॥ | | |
| ॥ ರಿ ಮ | । ಪ ದ ಮ ಪ | ॥ ದ ಪ | । ಮ ಗ ರಿ ಸ॥ | |
| ॥ ಕ ರು | । ಣ ಸಾ ಗ ರ | ॥ ಕ ರಿ | । ವ ದ ನಾ ॥ ಲಂಬೋ | |
| ॥ ಮ ಪ | । ದ ಸ ಸ ರಿ | ॥ ರಿ ಸ | । ದ ಪ ಮ ಪ॥ | |
| ॥ ಸಿ ದ್ಧ | । ಚಾ ರ ಣ | ॥ ಗಣ | । ಸೇ ವಿ ತ ॥ | |
| ॥ ರಿ ಮ | । ಪ ದ ಮ ಪ | ॥ ದ ಪ | । ಮ ಗ ರಿ ಸ॥ | |
| ॥ ಸಿ ದ್ಧಿ | । ವಿ ನಾ ಯಕ . | ॥ ತೇ . | । ನಮೋನಮೋ ॥ ಲಂಬೋ | |
| ॥ ಮ ಪ | । ದ ಸ ಸ ರಿ | ॥ ರಿ ಸ | । ದ ಪ ಮ ಪ॥ | |
| ॥ ಸ ಕ | । ಲ ವಿದ್ಯಾ | ॥ . ದಿ | । ಪೂ . ಜಿ ತ ॥ | |
| ॥ ರಿ ಮ | । ಪ ದ ಮ ಪ | ॥ ದ ಪ | । ಮ ಗ ರಿ ಸ॥ | |
| ॥ ಸ . | । ರ್ವೋತ್ತಮ | ॥ ತೇ. | । ನಮೋನಮೋ ॥ ಲಂಬೋ | |

## 2. ರಾಗ - ಮಲಹರಿ

|| ಕುಂದಗೌರ ಗೌರೀವರ ಮಂದಿರಾಯ ಮಾನಮಕುಟ ||

|| ಮಂದಾರ ಕುಸಮಾಕರ ಮಕರಂದಂ ವಾಸಿತುವಾ ||

|| ಹೇಮಕೂಟ ಸಿಂಹಾಸನ ವಿರೂಪಾಕ್ಷ ಕರುಣಾಕರ ||

|| ಮಂದಾರ ಕುಸುಮಾಕರ ಮಕರಂದಂ ವಾಸಿತುವಾ ||

|| ಚಂದಮಾಮ ಮಂದಾಕಿನಿ ಮಂದಿರಾಯ ಮಾನಮಕುಟ||

|| ಮಂದಾರ ಕುಸುಮಾಕರ ಮಕರಂದಂ ವಾಸಿತುವಾ ||

ಕುಂದಪುಷ್ಪದಂತೆ ಬೆಳ್ಳಗಿರುವ, ಪಾರ್ವತಿಯ ಪತಿಯಾದ ಶಿವನನ್ನು ಸ್ತುತಿಸುವ ಗೀತೆ ಇದು. ಕೈಲಾಸಗಿರಿಯಲ್ಲಿ ಸಿಂಹಾಸನಾರೂಢನಾಗಿರುವ ಮೂರುಕಣ್ಣುಗಳುಳ್ಳ ಕರುಣಾ ಸಾಗರನೇ ಚಂದ್ರ ಗಂಗೆಯರನ್ನು ಧರಿಸಿರುವವನೇ ನಮಗೆ ಶುಭವನ್ನು ನೀಡೆಂದು ಪ್ರಾರ್ಥಿಸುವ ಗೀತೆ.

1. || ದ ಪ | ಮ ಗ ರಿ ಸ || ರಿ ಮ | ಪ ದ ಮ ಪ || ದ ರಿ | ರಿ ಸ ದ ಪ || ದ ಪ | ಮಗ ರಿ ಸ ||

   || ಕುಂದ| ಗೌ . . ರ || ಗೌ . | ರಿ ೀ ವ ರ || ಮಂದಿ| ರಾ. ಯ || ಮಾ | ನ ಮ ಕು ಟ ||

   || ಸಾ | ರೀ ರೀ || ದ ಪ | ಮ ಗ ರಿ ಸ || ಸ ರಿ | ಪ ಮಗ ರಿ || ಸ ರಿ | ಗ ರಿ ಸಾ ||

   || ಮಂ | ದಾ ರ || ಕು ಸು | ಮಾ ಕ ರ || ಮ ಕ | ರ ಂ ದಂ || ವಾ . | ಸಿ ತು ವಾ ||

2. || ದ ಪ | ಮ ಗ ರಿ ಸ || ರಿ ಮ | ಪ ದ ಮ ಪ || ದ ರಿ | ರಿ ಸ ದ ಪ || ದ ಪ | ಮಗ ರಿ ಸ ||

   || ಹೇಮ|ಕೂ. . ಟ || ಸಿಂ . | ಹಾ ಸ ನ || ವಿ ರು | ಪಾ . ಕ್ಷ || ಕ ರು | ಣಾ ಕ ರ ||

   || ಸಾ | ರೀ ರೀ || ದ ಪ | ಮ ಗ ರಿ ಸ || ಸ ರಿ | ಪ ಮ ಗ ರಿ || ಸ ರಿ | ಗ ರಿ ಸಾ ||

   || ಮಂ | ದಾ ರ || ಕು ಸು | ಮಾ ಕ ರ || ಮ ಕ | ರಂ ದಂ || ವಾ . | ಸಿ ತು ವಾ ||

3. || ಚಂದ | ಮಾಮ || ಮಂ | ದಾಕಿನಿ || ಮಂದಿ | ರಾಯ || ಮಾ | ನಮಕುಟ ||

   || ಮಂ | ದಾರ || ಕುಸು | ಮಾಕರ || ಮಕ | ರಂ. ದಂ|| ವಾ | ಸಿತುವಾ ||

ಸೂ : ಈ ಭಾಗವನ್ನು ಕುಂದಗೌರದಂತೆ ಹಾಡಬೇಕು

ಣ * ** ❁* ** ಛ

**3. ರಾಗ - ಮಲಹರಿ** **ತತ್ವಗೀತೆ** **ತಿಶ್ರ ಜಾತಿ ತ್ರಿಪುಟ ತಾಳ**

॥ ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆದವರಂತೆ ಕಾಣಿರೊ॥

॥ ಹರಿಯ ಕರುಣದೊಳಾದ ಭಾಗ್ಯವ ಹರಿ ಸಮರ್ಪಣೆ ಮಾಡಿ ಬದುಕಿರೊ॥

॥ ಶ್ರೀ ಪುರಂದರ ವಿಠಲರಾಯನ ಚರಣ ಕಮಲವ ನಂಬಿ ಬದುಕಿರೊ॥

॥ ಹರಿಯ ಕರುಣದೊಳಾದ ಭಾಗ್ಯವ ಹರಿ ಸಮರ್ಪಣೆ ಮಾಡಿ ಬದುಕಿರೊ॥

ಮಾನವನು ಗಳಿಸಿದ್ದನ್ನು ದೇವರಿಗೆ ಸಮರ್ಪಿಸಿ, ಅದನ್ನೇ ದೇವರಿಂದ ಮರಳಿ ಪಡೆಯುವುದು ಶಿಷ್ಟಾಚಾರ. ಕೆರೆಯಿಂದ ತಂದ ನೀರನ್ನು ಉಪಯೋಗಿಸಿ ಕೆರೆಗೆ ಸೇರುವಂತೆ ಮಾಡುವ ಹಾಗೆ ಶ್ರೀಪುರಂದರವಿಠಲನ ಚರಣಗಳನ್ನು ನಂಬಿ, ಹರಿಯಿಂದ ಪಡೆದ ಭಾಗ್ಯವನ್ನು ಹರಿ ಸಮರ್ಪಣೆ ಮಾಡಿ ಬದುಕಿರೊ ಎನ್ನುತ್ತಾರೆ.

॥ ದ ಸಂ ಸಂ । ದ ಪ । ಮ ಪ ॥ ದ ದ ಪ । ಮಮ । ಪಾ ॥ ದದಸಂ । ದಪ । ಮ ಪ ॥ ದದಪ । ಮಗ । ರಿ ಸ ॥

॥ ಕೆರೆಯ । ನೀ । ರ ನು ॥ ಕೆ ರೆ ಗೆ । ಚೆ. । ಲ್ಲಿ ॥ ವರವ । ಪಡೆ । ದ ವ ॥ ರ ಂತೆ । ಕಾ । ಣಿ ರೊ ॥

॥ ಸ ಸ ರಿ । ಸ ರಿ । ಸ ರಿ ॥ ದ ದ ಪ । ಮ ಗ । ರಿ ಸ ॥ ದ ಪ ದ । ಸಾಂ । ದ ಪ ॥ ದ ದ ಪ । ಮಗ । ರಿಸ ॥

॥ ಹ ರಿಯ । ಕ ರು । ಣದೊ ॥ ಳಾ ದ । ಭಾ . । ಗ್ಯ ವ ॥ ಹ ರಿ ಸ । ಮ । ರ್ಪಣೆ॥ ಮಾ ಡಿ । ಬದು। ಕಿರೊ॥

॥ ದ ಸಂ ಸಂ । ದ ಪ। ಮ ಪ ॥ ದ ದ ಪ । ಮಮ । ಪ ಪ ॥ ದ ದ ಸಂ । ದಪ । ಮಪ ॥ ದ ದ ಪ । ಮಗ । ರಿಸ ॥

॥ ಶ್ರೀ ಪು । ರಂ . । ದ ರ ॥ ವಿ ಠ ಲ । ರಾ । ಯ ನ ॥ ಚ ರ ಣ । ಕ ಮ । ಲ ವ ॥ ನ ಂ ಬಿ । ಬದು । ಕಿರೊ॥

॥ ಸ ಸ ರಿ । ಸ ರಿ । ಸ ರಿ ॥ ದದಪ । ಮ ಗ । ರಿ ಸ ॥ ದ ಪ ದ । ಸಾಂ । ದ ಪ ॥ ದ ದ ಪ । ಮಗ । ರಿಸ ॥

॥ ಹರಿಯ। ಕ ರು । ಣದೊ ॥ ಳಾ ದ । ಭಾ . । ಗ್ಯ ವ ॥ ಹ ರಿ ಸ । ಮ ।ರ್ಪ ಣೆ ॥ ಮಾ ಡಿ । ಬದು । ಕಿರೊ॥

**ರಾಗ - ಮಲಹರಿ** **ವಿಷ್ಣುಗೀತೆ** **ತಿಶ್ರಜಾತಿ ತ್ರಿಪುಟ ತಾಳ**

॥ ಪದುಮನಾಭ ಪರಮಪುರಷ ಪರಂಜ್ಯೋತಿ ಸ್ವರೂಪ ॥

॥ ಉದಧಿ ನಿವಾಸ ಉರಗಶಯನ ಉನ್ನತೋನ್ನತ ಮಹಿಮ ॥

॥ ಯದುಕುಲೋತ್ತಮ ಯಜ್ಞರಕ್ಷಕ ಅಜ್ಞಶಿಕ್ಷಕ ರಾಮನಾಮ ॥ ಪದುಮ॥

॥ ವಿಭೀಷಣ ಪಾಲಕ ನಮೋ ನಮೋ । ಇಭವರದಾಯಕ ನಮೋ ನಮೋ॥

॥ ವಿದುರ ವಂದ್ಯ ವಿಮಲಚರಿತ ವಿಹಂಗಾಧಿರೋಹಣ ॥

॥ ಶುಭಪ್ರದ ಸುಮನೋರಥ ಸುರೇಂದ್ರ ಮನೋರಂಜನ ॥

॥ ಅಭಿನವ ಪುರಂದರ ವಿಠಲ ಭಲರೇ ರಾಮನಾಮ ॥ ಪದುಮ॥

॥ ವಿಭೀಷಣ ಪಾಲಕ ನಮೋ ನಮೋ । ಇಭವರದಾಯಕ ನಮೋ ನಮೋ॥

ವಿವಿಧ ಅವತಾರಗಳನ್ನೆತ್ತಿ ರಕ್ಷಿಸಿದ ವಿಷ್ಣುವನ್ನು ಈ ಗೀತೆಯಲ್ಲಿ ವರ್ಣಿಸಿದ್ದಾರೆ. ಪದುಮನಾಭ, ಪರಮಪುರಷ, ಪರಂಜ್ಯೋತಿ ಸ್ವರೂಪನೆ, ವಿದುರನಿಂದ ವಂದಿತನೆ, ವಿಮಲ ಚರಿತನೇ, ಗರುಡನ ಮೇಲೆ ಕುಳಿತಿರುವವನೇ, ಹಾಲಿನ ಸಮುದ್ರದಲ್ಲಿ ವಾಸವಾಗಿರುವವನೇ, ಹಾವಿನ ಮೇಲೆ ಮಲಗಿರುವವನೇ, ಉನ್ನತವಾದ ಮಹಿಮೆಗಳುಳ್ಳವನೇ, ಶ್ರೀ ಕೃಷ್ಣನೆ, ಯಜ್ಞವನ್ನು ರಕ್ಷಿಸಿ, ಯಜ್ಞ ಶಿಕ್ಷಕನಾದ ಶ್ರೀರಾಮನೇ, ವಿಭೀಷಣನನ್ನು ರಕ್ಷಿಸಿದ ಶ್ರೀರಾಮನಿಗೆ ನಮಸ್ಕಾರ. ಗಜೇಂದ್ರನನ್ನು ರಕ್ಷಿಸಿದ ವಿಷ್ಣುವಿಗೆ ನಮಸ್ಕಾರ. ಶುಭವನ್ನೀಯುವ, ಒಳ್ಳೆಯ ಮನೋರಥಗಳನ್ನುಳ್ಳ ದೇವೇಂದ್ರನ ಮನಸ್ಸನ್ನು ರಂಜಿಸುವ ಪುರಂದರವಿಠಲನಾದ ಶ್ರೀರಾಮನಿಗೆ ಜಯವಾಗಲಿ.

॥ ರಿ ಸ ಧ । ಸಾ । ಸಾ ॥ ಮಗರಿ । ಮಮ । ಪಾ ॥ ಸ ದಾ । ದ ಪ । ಮಪ ॥ ದ ದ ಪ । ಮಗ । ರಿಸ ॥
॥ ಪದುಮ । ನಾ । ಭಾ ॥ ಪರಮ । ಪುರು । ಷ. ॥ ಪ ರಂ । ಜ್ಯೋ।. ತಿ ॥ ಸ್ವ ರೂ. । ಪ. । . . ॥
॥ ಪಮ ಪ । ದ ಸೆ । ದ ಸೆ । ರಿ ಸೆ ದ । ದ ಸೆ । ದಪ ॥ ದ ದ ಪ । ಪಾ । ಪ ಮ ॥ ರಿ ಮ ಮ । ಪಾ । ಪಾ ॥
॥ ಉದ ಧಿ । ನಿ ವಾ । . ಸ ॥ ಉ ರ ಗ । ಶ ಯ । ನ. ॥ ಉ. ನ್ನ । ತೋ । ನ್ನ ತ ॥ ಮ ಹಿ . । ಮಾ । . . ॥
॥ ದ ದ ಪ । ಪಾ । ಪ ಮ ॥ ರೀ ಮ । ಮಗ । ರಿ ಸ ॥ ಸಾ ಸ । ದ ದ । ದ ಪ ॥ ದ ದ ಪ । ಮ ಗ । ರಿ ಸ ॥
॥ಯದುಕು। ಲೋ । ತ್ತ ಮ ॥ ಯಜ್ಞ । ರ. । ಕ್ಷ ಕ ॥ ಅ ಜ್ಞ । ಶಿ. । ಕ್ಷ ಕ ॥ ರಾ . ಮ। ನಾ . । . ಮ ॥

॥ ದಸಾ । ದಪ । ಮಪ ॥ ದ ದ ಪ । ಮ ಗ । ರಿ ಸ ॥
॥ ವಿಭೀ । ಷಣ । ಪಾ ॥ ಲ ಕ . । ನ ಮೋ । ನಮೋ ॥
॥ ಇಭ । ವರ । ದಾ ॥ ಯ ಕ . । ನ ಮೋ । ನಮೋ ॥

॥ ರಿ ಸ ಧ । ಸಾ । ಸಾ ॥ ಮಗರಿ । ಮಮ । ಪಾ ॥ ಸ ದಾ । ದ ಪ । ಮಪ ॥ ದ ದ ಪ । ಮಗ । ರಿಸ ॥
॥ ವಿದುರ । ವಂ । ದ್ಯ । ವಿಮಲ । ಚ ರಿ । ತ. ॥ ವಿ ಹಂ । ಗಾ । . ಧಿ ॥ ರೋ ಹ । ಣ . । . . ॥
॥ ಪಮ ಪ । ದ ಸೆ । ದ ಸೆ । ರಿ ಸೆ ದ । ದ ಸೆ । ದಪ ॥ ದ ದ ಪ । ಪಾ । ಪ ಮ ॥ ರಿ ಮ ಮ । ಪಾ । ಪಾ ॥
॥ ಶುಭ . । ಪ್ರ ದ । ಸುಮ॥ ನೋ .ರ। ಥ . । . ಸು ॥ ರೇಂ ದ್ರ। ಮ । ನೋ ॥ ರಂ . ಜ । ನಾ । . . ॥
॥ ದ ದ ಪ । ಪಾ । ಪ ಮ ॥ ರೀ ಮ । ಮಗ । ರಿ ಸ ॥ ಸಸಸ । ದ ದ । ದ ಪ ॥ ದ ದ ಪ । ಮ ಗ । ರಿ ಸ ॥
॥ ಅ ಭಿ ನ । ವ । ಪು. ॥ ರಂ ದ । ರ. । . . ॥ ವಿಠಲ । ಭ . । ಲ ರೇ॥ ರಾ .ಮ । ನಾ . । . ಮ ॥

(ಪದುಮನಾಭ ಪರಮಪುರುಷ ಪರಂಜ್ಯೋತಿ ಸ್ವರೂಪ
ವಿದುರವಂದ್ಯ ವಿಮಲಚರಿತ ವಿಹಂಗಾಧಿರೋಹಣ
ಉದಧಿನಿವಾಸ ....... ಹೀಗೆ ಹಾಡುವ /ನುಡಿಸುವ ರೂಢಿ ಇದೆ)

ಙ ❖ ❖❖ ❁❖ ❖❖ ಛ

## ಸಂಚಾರಿ ಗೀತೆಗಳು-4

1. ರಾಗ - ಮೋಹನ | ಲಕ್ಷ್ಮೀಗೀತೆ | ತಾಳ - ರೂಪಕತಾಳ

ಆ : ಸರಿಗಪದಸ

ಅವ: ಸದಪಗರಿಸ (ರಾಗಲಕ್ಷಣಕ್ಕೆ 4 ನೇ ಅಧ್ಯಾಯ ಗಮನಿಸಿ)

॥ ವರವೀಣಾ ಮೃದುಪಾಣಿ ವನರುಹಲೋಚನ ರಾಣಿ ॥

॥ ಸುರುಚಿರಬಂಭರವೇಣಿ ಸುರನುತ ಕಲ್ಯಾಣಿ ॥

॥ ನಿರುಪಮ ಶುಭ ಗುಣಲೋಲಾ ನಿರತ ಜಯಪ್ರದ ಶೀಲಾ ॥

॥ ವರದಪ್ರಿಯ ರಂಗನಾಯಕಿ ವಾಂಛಿತ ಫಲದಾಯಕಿ ॥

॥ ಸರಸಿಜಾಸನ ಜನನಿ ಜಯ ಜಯ ॥

ಶ್ರೇಷ್ಠವಾದ ವೀಣೆಯನ್ನು ಮೃದುವಾದ ಕೈಗಳಲ್ಲಿ ಹಿಡಿದಿರುವ, ಕಮಲದಂತೆ ಕಣ್ಣುಗಳುಳ್ಳವನರಾಣಿ, ಕಪ್ಪುಕೂದಲುಗಳನ್ನುಳ್ಳ, ದೇವತೆಗಳಿಂದ ಸುತ್ತಿಸಲ್ಪಡುವ, ಕಲ್ಯಾಣಿ, ಎಣೆಯಿಲ್ಲದ ಶುಭಗುಣಗಳುಳ್ಳವಳೇ, ಸತತವಾಗಿ ಜಯವನ್ನು ನೀಡುವವಳೇ, ವರದ ಪ್ರಿಯಳಾದ ಶ್ರೀರಂಗ ನಾಯಕಿಯೇ, ಆಶಿಸಿದ ಫಲಗಳನ್ನು ನೀಡುವವಳೇ, ಬ್ರಹ್ಮನ ತಾಯಿಯಾದ ಲಕ್ಷ್ಮೀದೇವಿಯೇ ಜಯವಾಗಲಿ.

॥ ಗಗ । ಪಾಪಾ ॥ ದ ಪ । ಸಾ ಸಾ ॥ ರಿ ಸ । ದ ದ ಪಾ ॥ ದಪ । ಗಗ ರೀ ॥ ಗ ಪ । ದಸದಪ ॥

॥ ವರ । ವೀಣಾ ॥ ಮೃದು । ಪಾ ಣಿ ॥ ವ ನ । ರು ಹ ಲೋ ॥ ಚನ । ರಾ ಣೀ ॥ ಸು ರು । ಚಿರಬಂ ॥

॥ ದ ಪ । ಗಗರೀ ॥ ಗ ಗ । ದ ಪ ಗರಿ ॥ ಪ ಗ । ಗ ರಿ ಸಾ ॥ ಗಗ । ಗಗ ರಿ ಗ ॥ ಪ ಗ । ಪಾ ಪಾ ॥

॥ ಬ ರ । ವೇಣಿ ॥ ಸು ರ । ನುತ ಕ . ॥ ಲ್ಯಾ । . . ಣಿ . ॥ ನಿರು । ಪಮಶುಭ ॥ ಗು ಣ । ಲೋಲಾ ॥

॥ ಗ ಗ । ದ ಪ ದಾ ॥ ದ ಪ । ಸಾ ಸಾ ॥ ದ ಗ । ರಿ ರಿ ಸ ಸ ॥ ದ ಸ । ದಾದಪ ॥ ಗಪ । ದಸದಪ ॥

॥ ನಿರ । ತಜಯ ॥ ಪ್ರ ದ । ಶೀ ಲಾ ॥ ವ ರ । ದಾ ಪ್ರಿಯ ॥ ರಂಗ । ನಾಯಕಿ ॥ ವಾಂ । ಛಿತಫಲ ॥

॥ ದಪ । ಗಗರಿಸ ॥ ಸ ರಿ । ಗಾ ಗಾ ॥ ಗ ರಿ । ಪ ಗ ರೀ ॥ ಸ ರಿ । ಸ ಗ ರಿ ಸ ॥

॥ ದಾ .।. ಯಕಿ ॥ ಸ ರ । ಸೀ ಜಾ ॥ ಸ ನ । ಜ ನ ನೀ ॥ ಜಯ । ಜಯ ಜಯ ॥

2. ರಾಗ - ಕಾಂಭೋಜಿ | ಕೃಷ್ಣಗೀತೆ | ಆದಿತಾಳ

ಆ : ಸ ರಿ ಗ ಮ ಪ ದ ಸ

ಅವ : ಸ ನಿ ದ ಪ ಮ ಗ ರಿ ಸ

